# ಸಾಮಾಜಿಕ ಬದಲಾವಣೆಯ ಹಾದಿಯಲ್ಲಿ ಬೇಡರು

(ಕೂಡ್ಲಿಗಿ ಪಟ್ಟಣವನ್ನು ಅನುಲಕ್ಷಿಸಿ)

ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ


ಸಂಶೋಧಕರು

**ಕೊಟ್ರೇಶ ಪಿ.**

ಮಾರ್ಗದರ್ಶಕರು

**ಚೆಲುವರಾಜು**

ಅಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬







ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

17

# ಸಾಮಾಜಿಕ ಬದಲಾವಣೆಯ ಹಾದಿಯಲ್ಲಿ ಬೇಡರು

(ಕೂಡ್ಲಿಗಿ ಪಟ್ಟಣವನ್ನು ಅನುಲಕ್ಷಿಸಿ)

ಎಂ.ಫಿಲ್ ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ


ಸಂಶೋಧಕರು

**ಕೊಟ್ರೇಶ. ಪಿ.**

ಮಾರ್ಗದರ್ಶಕರು

**ಚೆಲುವರಾಜು**

ಅಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬





ಸಮಾಜ ವಿಜ್ಞಾನಗಳ ನಿಕಾಯ

**ಬುಡಕಟ್ಟು ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೩

# ದೃಢೀಕರಣ ಪತ್ರ

ಶ್ರೀ ಕೊಟ್ರೇಶ ಪಿ. ಇವರು 'ಸಾಮಾಜಿಕ ಬದಲಾವಣೆಯ ಹಾದಿಯಲ್ಲಿ ಬೇಡರು' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೮ ಏಪ್ರಿಲ್ ೨೦೦೩
ಸ್ಥಳ : ವಿದ್ಯಾರಣ್ಯ

(ಚೆಲುವರಾಜು)
ಮಾರ್ಗದರ್ಶಕರು
ಅಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಪ್ರಮಾಣ ಪತ್ರ

**'ಸಾಮಾಜಿಕ ಬದಲಾವಣೆಯ ಹಾದಿಯಲ್ಲಿ ಬೇಡರು'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಶ್ರೀ ಚೆಲುವರಾಜು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**(ಕೊಟ್ರೇಶ ಪಿ.)**
ಸಂಶೋಧಕರು

**ದಿನಾಂಕ** : ೨೯ ಏಪ್ರಿಲ್ ೨೦೦೩
**ಸ್ಥಳ** : ವಿದ್ಯಾರಣ್ಯ

ಪರಿವಿಡಿ

# ಸಾಮಾಜಿಕ ಬದಲಾವಣೆಯ ಹಾದಿಯಲ್ಲಿ ಬೇಡರು

## ಕೂಡ್ಲಿಗಿ ಪಟ್ಟಣವನ್ನು ಅನುಲಕ್ಷಿಸಿ

17



# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನ

## ಪ್ರಸ್ತಾವನೆ

ಸಮಾಜವು ನಿಂತ ನೀರಲ್ಲ ಅದು ನಿತ್ಯ ಪರಿವರ್ತನಾ ಶೀಲವಾದುದು. ತನ್ನೊಳಗಿನ ಹಲವಾರು ಅಂಶಗಳಲ್ಲಿ ಬದಲಾವಣೆಗಳನ್ನು ಕಂಡುಕೊಂಡಿದೆ. 'ಮಾನವ ಹಾಗೂ ಸಮಾಜ' ಇವು ಒಂದನ್ನು ಬಿಟ್ಟು ಮತ್ತೊಂದಿಲ್ಲ. ಮಾನವ ಸಮಾಜದ ಚರಿತ್ರೆ ತುಂಬಾ ದೀರ್ಘವಾದುದು. ಒಂದು ಕಾಲದ ಅನಾಗರಿಕ ಮಾನವ ಸಮುದಾಯ ಬೆಳೆದು ಆಧುನಿಕರಣಗೊಂಡಿದೆ. ನಾಗರೀಕತೆ ಹೊಂದಿದೆ ಎಂದು ಹೇಳಬಹುದು. ಮಾನವನು ಜನಿಸಿ ಹಂತ ಹಂತವಾಗಿ ವಿಕಾಸ ಹೊಂದಿ ಅವನ ಬೌದ್ಧಿಕ ಹಾಗೂ ಭೌತಿಕ ಅಂಶಗಳಲ್ಲಿ ಬದಲಾವಣೆ ಹೊಂದುತ್ತಾನೆ. ಇದು ಒಂದು ರೀತಿಯ ಪರಿವರ್ತನೆ ಅಥವಾ ಬದಲಾವಣೆ ಅದೇ ರೀತಿ ಸಮಾಜವೂ ಸಹ ಹುಟ್ಟಿದಾಗಿನಿಂದಲೇ ವಿಕಾಸಗೊಳ್ಳುತ್ತಾ ಬಂದಿದೆ. ಆದರೆ ಸಮಾಜ ಅವಿನಾಶಿ ಗುಣವನ್ನು ಹೊಂದಿದೆ. ಮಾನವ ಇದಕ್ಕೆ ಹೊರತಾಗಿದ್ದಾನೆ.

ಹೀಗೆ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಬದಲಾವಣೆಗೊಂಡ ಈ ಸಮಾಜದಲ್ಲಿ ಹಲವಾರು ಅಂಶಗಳಲ್ಲಿ ಬದಲಾವಣೆಗಳು ಸಂಭವಿಸಿವೆ. ಇದರ ಪ್ರಭಾವ ತನ್ನ ಎಲ್ಲಾ ಅಂಶಗಳ ಮೇಲೂ ಬೀರಿದೆ. ಬದಲಾವಣೆ ಅಥವಾ ಪರಿವರ್ತನಾ ಅಂಶಗಳ ಪಟ್ಟಿಯಲ್ಲಿ ಬುಡಕಟ್ಟು ಜನರ ಜೀವನ ವಿಧಾನವೂ ಒಂದಾಗಿದೆ. ದೇಶದ ವಿವಿದೆಡೆಗಳಲ್ಲಿ ನೆಲೆಸಿರುವ ಬುಡಕಟ್ಟು ಜನರ ಬದುಕು ವಿವಿಧ ಕಾರಣಗಳಿಂದಾಗಿ

ಸ್ಥಿತ್ಯಂತರಗೊಳ್ಳುತ್ತಿದೆ. ಈ ಸಮುದಾಯದವರ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಅಂಶಗಳಲ್ಲಿ ಇಂದು ನಾವು ಕೊಂಚ ಬದಲಾವಣೆ ಆಗಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದಾದ ಅಂಶವಾಗಿದೆ.

ಸಾಮಾಜಿಕ ಬದಲಾವಣೆ ಹಾದಿಯಲ್ಲಿ ಇಂದು ಸಾಕಷ್ಟು ಸಮುದಾಯಗಳು ಸಾಗುತ್ತಿರುವುದನ್ನು ಕಾಣಬಹುದು. ಈ ಹಿನ್ನಲೆಯಲ್ಲಿ ಪ್ರಾಚೀನ ಬುಡಕಟ್ಟುಗಳಲ್ಲಿ ಒಂದಾದ ಬೇಡ ಸಮುದಾಯವು ಒಂದಾಗಿದೆ. ಅತೀ ಹೆಚ್ಚು ಜನಸಂಖ್ಯೆ ಹೊಂದಿರುವ ಈ ಸಮುದಾಯವು ಇಂದು ವಿವಿಧ ರೀತಿಯ ನಗರ, ಗ್ರಾಮ, ಪಟ್ಟಣಗಳಲ್ಲಿ ನೆಲೆಸಿದ್ದಾರೆ. ಇವರು ಇಂದಿನ ದಿನಗಳಲ್ಲಿ ಸಮಾಜದ ಮೇಲೆ ಹಿಡಿತ ಸಾಧಿಸಿರುವ ಅಂಶಗಳಾದ, ಆಧುನೀಕರಣ, ನಗರೀಕರಣ, ಪಾಶ್ಚಾತ್ಯೀಕರಣ, ಔದ್ಯೋಗಿಕರಣಗಳ ಪ್ರಭಾವಕ್ಕೆ ಒಳಗಾಗಿ ಬದಲಾವಣೆಗೊಳ್ಳುತ್ತಲಿದ್ದಾರೆ. ಇದುವರೆಗೂ ಹಲವು ರೀತಿಯ ಬುಡಕಟ್ಟುಗಳ ಸಂಸ್ಕೃತಿ ಹಾಗೂ ಅವರ ಜೀವನಕ್ರಮಗಳ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಆದರೆ ಇಂದು ಸಮಾಜದಲ್ಲಿ ಇಂತಹ ಸಮುದಾಯಗಳು ಬದಲಾವಣೆಯ ಹಾದಿಯಲ್ಲಿ ಸಾಗುತ್ತಿವೆ. ಇವರ ಯಾವ ಯಾವ ಅಂಶಗಳಲ್ಲಿ ಪರಿವರ್ತನೆಗಳಾಗಿವೆ ಎಂಬ ವಿಷಯಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಸಂಶೋಧಿಸಬೇಕಾಗಿದೆ. ಅದೇ ರೀತಿ ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿರುವ ಸಮುದಾಯಗಳ ಜೀವನ ಕ್ರಮಕ್ಕಿಂತಲೂ ಹೆಚ್ಚಾಗಿ ಪಟ್ಟಣ ಪ್ರದೇಶಗಳಲ್ಲಿನ ಜನರ ಜೀವನ ವಿಕಾಸ ಹೊಂದಿದೆ. ಇದರಿಂದ ಅವರ ಹಲವು ಅಂಶಗಳಲ್ಲಿ ಬದಲಾವಣೆಗಳು ಗೋಚರಿಸುತ್ತವೆ. ಇಂತಹ ಅಂಶಗಳ ಬಗ್ಗೆ ಇಂದು ಅಧ್ಯಯನ ನಡೆಸುವುದು ಅವಶ್ಯಕವಾಗಿದೆ.

## ಅಧ್ಯಯನದ ಉದ್ದೇಶ

ಪ್ರಸ್ತುತ ಸಮಾಜದಲ್ಲಿರುವ ವಿವಿಧ ರೀತಿಯ ಜಾತಿ, ಜನಾಂಗ ಹಾಗೂ ಸಮುದಾಯಗಳು ತಮ್ಮ ಜೀವನಕ್ರಮದಲ್ಲಿ ತಮಗರಿವಿಲ್ಲದೆಯೇ ಪರಿವರ್ತನೆಗೊಳ್ಳುತ್ತಿವೆ. ಇದಕ್ಕೆ ಬೇಡ ಸಮುದಾಯವು ಹೊರತಾಗಿಲ್ಲ. ಆಧುನಿಕ ಸಮಾಜಕ್ಕೆ ಹೊಂದಿಕೊಂಡಂತೆ ಪ್ರಸ್ತುತ ದಿನಗಳಲ್ಲಿ ಈ ಸಮುದಾಯ ವಿವಿಧ ಕಡೆಗಳಲ್ಲಿ ನೆಲೆಸಿದೆ. ಕೆಲವು ಜನರು ಅತೀ ಹಿಂದುಳಿದ ಹಳ್ಳಿಗಳಲ್ಲಿದ್ದರೆ ಇನ್ನು ಕೆಲವು ಜನರು ನಗರ, ಪಟ್ಟಣ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಇವರ ಮೇಲೆ ಇತರೆ ಸಮುದಾಯದವರ ಪ್ರಭಾವ ಬೀರಿ ಇಂದು ತನ್ನಲ್ಲಿರುವ ಕೆಲವು ಆಚರಣಾಕ್ರಮ ಹಾಗೂ ಜೀವನ ವಿಧಾನದಲ್ಲಿ ಬದಲಾವಣೆಯಾಗಿರುವುದು ಸೂಕ್ಷ್ಮವಾಗಿ ಕಂಡುಬರುವ ವಿಚಾರವಾಗಿದೆ. ಜೊತೆಗೆ ಇವರ ಸಾಮಾಜಿಕ ಸಂಸ್ಥೆ, ಆರ್ಥಿಕ, ರಾಜಕೀಯ, ಶಿಕ್ಷಣ ಕ್ಷೇತ್ರಗಳಲ್ಲಿ ಇಂದು ಅಭಿವೃದ್ಧಿ ಸಾಧಿಸಿದ್ದಾರೆ ಹಾಗೂ ಸಾಧಿಸುವ ಪವಣಿಕೆಯಲ್ಲಿದ್ದಾರೆ. ಪ್ರಾಚೀನ ಕಾಲದಲ್ಲಿ ಇವರು ಆಚರಿಸುತ್ತಿದ್ದ ಕಟ್ಟುನಿಟ್ಟಿನ ಕ್ರಮಗಳು ಸ್ವಲ್ಪಮಟ್ಟಿಗೆ ಸಡಿಲಗೊಂಡಿವೆ. ಈ ರೀತಿ ಪರಿವರ್ತನೆಗೆ ನಗರೀಕರಣ, ಸಂಸ್ಕೃತೀಕರಣ ಇತ್ಯಾದಿ ಹಲವಾರು ಅಂಶಗಳು ಕಾರಣೀಭೂತವಾಗಿದೆ. ಇವರ ಬದಲಾವಣೆಗೊಳಪಡಿಸಿರುವ ಅಂಶಗಳಾವುವು? ಹಾಗೂ ಈ ರೀತಿ ಪರಿವರ್ತನೆಗೆ ಕಾರಣಗಳೇನು? ಎಂಬುದನ್ನು ಶೋಧಿಸುವುದೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಮೂಲತಃ ಒಂದೇ ಘಟಕದಿಂದ ಬಂದಿರುವ ಈ ಸಮುದಾಯವು ನಂತರದ ದಿನಗಳಲ್ಲಿ ತನ್ನಲ್ಲೇ ಎರಡು ಗುಂಪುಗಳನ್ನು ಸೃಷ್ಟಿಸಿಕೊಂಡಿತು. ಅವುಗಳು ಇಂದು ಮ್ಯಾಸಬೇಡ

ಹಾಗೂ ಊರುಬೇಡ ಎಂಬ ಹೆಸರುಗಳೊಂದಿಗೆ ಪ್ರಚಲಿತದಲ್ಲಿವೆ. ಇಂದು ಪರಿವರ್ತನೆ ದಾರಿ ಹಿಡಿದು ಇತ್ತೀಚೆಗೆ ಪುನಃ ಹೊಂದಾಣಿಕೆ ಹಾಗೂ ಪರಸ್ಪರ ಸಂಕರಗೊಳ್ಳುವಲ್ಲಿ ಮುಂದಾಗಿವೆ. ಇದಕ್ಕೆ ಇವರಲ್ಲಿನ ಸಾಮಾಜಿಕ ಸಂಸ್ಥೆಗಳು ಹಾಗೂ ಸಾಂಸ್ಕೃತಿಕ ಅಂಶಗಳಲ್ಲಿ ಆದ ಪರಿವರ್ತನೆಯೇ ಕಾರಣವಾಗಿದೆ. ಇಂದು ಈ ಎರಡು ಉಪ ಪಂಗಡಗಳು ಯಾವ ವಿಶೇಷ ಅಂಶಗಳ ಮೂಲಕ ಹೊಂದಾಣಿಕೆಯಾಗುತ್ತಿದ್ದಾರೆ? ಇವರ ಸಾಮಾಜಿಕ ಸಂಸ್ಥೆಗಳಲ್ಲಾದ ವಿಶೇಷ ಬದಲಾವಣೆಗಳೇನು? ಎಂಬುದನ್ನು ಕಂಡುಕೊಳ್ಳುವುದೇ ಇದರ ಮುಖ್ಯ ಉದ್ದೇಶವಾಗಿದೆ. ಇದರೊಂದಿಗೆ ಈ ಎರಡು ಉಪ ಪಂಗಡಗಳನ್ನು ಪುನಃ ಒಂದುಗೂಡುವಂತೆ ಮಾಡಬಹುದಾಗಿದೆ.

ಬೇಡ ಸಮುದಾಯದವರು ಅನುಸರಿಸುವ ವಿವಿಧ ಆಚರಣೆಗಳಲ್ಲಿ ಬದಲಾವಣೆ ಕಾಣಬಹುದು. ಹಾಗೂ ಅವರು ಅಂತಹ ಆಚರಣೆಗಳನ್ನು ಸಂಪೂರ್ಣವಾಗಿ ಕೈಬಿಡದೇ ಅದಕ್ಕೆ ವಿಶೇಷವಾಗಿ ಈ ಸಮುದಾಯದ ಜನರು ವಿವಾಹ ಎಂಬ ಸಂಸ್ಥೆ ಮೂಲಕ ಯಾವ ರೀತಿ ಒಂದಾಗುತ್ತಿದ್ದಾರೆ ಎಂಬುದನ್ನು ತಿಳಿಸಲಾಗಿದೆ. ಈ ಎರಡು ಗುಂಪುಗಳಲ್ಲಿರುವ ಕೆಲವು ಏಕರೂಪದ ಸಂಬಂಧಗಳನ್ನು ಗಮನಿಸಿ, ಪ್ರಸ್ತುತ ಸಾಮಾಜಿಕ ಬದಲಾವಣೆಗಳಿಗನುಗುಣವಾಗಿ ಇವರು ಪ್ರಸ್ತುತ ದಿನಗಳಲ್ಲಿ ಯಾವ ರೀತಿ ಸಂಬಂಧಗಳನ್ನು ಹೊಂದಿದ್ದಾರೆ ಎಂಬುದನ್ನು ವಿವರಿಸಲಾಗಿದೆ. ಸದ್ಯ ನಾನು ಅಧ್ಯಯನ ಕೈಗೊಂಡ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಈ ಸಮುದಾಯದ ಜನರು ಹಲವು ಬದಲಾವಣೆಗಳನ್ನು ಕಂಡುಕೊಂಡಿದ್ದಾರೆ. ಇನ್ನು ವಿಶೇಷತೆ ಎಂದರೆ ಈ ಪ್ರದೇಶದಲ್ಲಿ ವಿವಾಹ, ಕುಟುಂಬ ಹಾಗೂ ಬಂಧುತ್ವ ಇತ್ಯಾದಿ ಅಂಶಗಳಲ್ಲಿ ವೈಪರೀತ್ಯಗಳಾಗಿವೆ. ವಿವಾಹಕ್ಕೆ ಸಂಬಂಧಿಸಿದಂತೆ ಈ ಅಧ್ಯಯನದಲ್ಲಿ ವಿಶೇಷ ಆಧ್ಯತೆ ನೀಡಲಾಗಿದೆ. ಈ ಪ್ರದೇಶದಲ್ಲಿನ ಬೇಡ ಸಮುದಾಯದವರಲ್ಲಿ ಪ್ರತ್ಯೇಕವಾಗಿರುವ ಎರಡು ಪಂಗಡಗಳಿವೆ ಅವುಗಳೆಂದರೆ ೧. ಮ್ಯಾಸಬೇಡ ಹಾಗೂ ೨. ಊರುಬೇಡ. ಇವರಿಬ್ಬರ ಮಧ್ಯೆ ಇಂದು ವಿವಾಹಗಳು ಜರುಗುತ್ತಿವೆ. ಈ ರೀತಿ ವಿವಾಹವಾಗುವುದಕ್ಕೆ ಕೆಲವು ಯುವಕ, ಯುವತಿಯರು ತುಂಬಾ ಕಷ್ಟಗಳನ್ನು ಅನುಭವಿಸಿದ ಉದಾಹರಣೆಗಳಿವೆ. ಇಂತಹ ಅಂಶಗಳ ಬಗ್ಗೆ ಸಂಶೋಧನೆ ನಡೆಸಿ ಈ ರೀತಿ ವಿವಾಹವಾಗಿರುವ ದಂಪತಿಗಳನ್ನು ಭೇಟಿ ಮಾಡಿ ಅವರ ಅಭಿಪ್ರಾಯ ಕಲೆಹಾಕಲಾಗಿದೆ. ಇದರೊಂದಿಗೆ ಈ ಸಮಾಜಕ್ಕೆ ಈ ಎರಡು ಗುಂಪುಗಳಲ್ಲಿರುವ ಭಿನ್ನತೆಗಳನ್ನು ಹೋಗಲಾಡಿಸುವ ಉದ್ದೇಶವನ್ನು ಹೊಂದಿದೆ. ಇಂತಹ ವಿವಾಹಗಳನ್ನು ನೆರವೇರಿಸಲು ಈ ಸಮುದಾಯಧ ಜನರಿಗೆ ಪ್ರೋತ್ಸಾಹಿಸುವುದು ಇದರೊಂದಿಗೆ ಇಂತಹ ದಂಪತಿಗಳ ಬಗ್ಗೆ ಸಮಾಜದಲ್ಲಿರುವ ಕೀಳರಿಮೆ ಭಾವನೆಯನ್ನು ಹೋಗಲಾಡಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ.

ಇಷ್ಟೆಲ್ಲ ಪ್ರಗತಿ ಸಾಧಿಸಿದ್ದರೂ ಸಹ ಇವರು ಕೆಲವು ಆಚರಣೆಗಳನ್ನು ಸಂಪೂರ್ಣವಾಗಿ ಕೈಬಿಡದೆ ಅವುಗಳಿಗೆ ಪೂರಕವಾಗಿ ಯಾವ ರೀತಿ ವ್ಯವಸ್ಥೆಗಳನ್ನು ಮಾಡಿಕೊಳ್ಳಲಾಗಿದೆ ಹಾಗೂ ಇಂದಿಗೂ ಇವರು ಬುಡಕಟ್ಟು ಸಂಸ್ಕೃತಿಯಲ್ಲಿ ಗುರುತಿಸಿಕೊಳ್ಳುವ ಲಕ್ಷಣಗಳನ್ನು ಉಳಿಸಿಕೊಂಡಿದ್ದಾರೆ. ಯಾವ ಲಕ್ಷಣಗಳನ್ನು ಇಂದು ಇವರು ಉಳಿಸಿಕೊಂಡಿದ್ದಾರೆ ಎಂಬುದನ್ನು ತಿಳಿಸುವುದು. ಒಂದು ಕಾಲದಲ್ಲಿ ಬುಡಕಟ್ಟಿನ ಜನರಲ್ಲಿ ಶಿಕ್ಷಣದ ಕೊರತೆ ಎದ್ದುಕಾಣುತ್ತಿತ್ತು. ಆದರೆ ಇಂದು ಶಿಕ್ಷಣ ರಂಗದಲ್ಲಿ ಸಾಕಷ್ಟು ಸಮುದಾಯಗಳು ಅಭಿವೃದ್ಧಿ ಹೊಂದಿವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಬೇಡ ಸಮುದಾಯವು ಶಿಕ್ಷಣದಲ್ಲಿ ಯಾವ ರೀತಿ ಪ್ರಗತಿ

ಸಾಧಿಸಿದೆ ಎಂಬುದನ್ನು ತಿಳಿಸುವ ಹಾಗೂ ಕೇವಲ ಬೇಟೆ, ಪಶುಪಾಲನೆ ಕಸುಬನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿದ್ದ ಬೇಡ ಸಮುದಾಯದವರು ಆಧುನಿಕತೆಗೆ ಒಳಗಾಗಿ ತಮ್ಮ ಉಪಜೀವನಕ್ಕಾಗಿ ಇಂದು ಎಂತಹ ವೃತ್ತಿಗಳನ್ನು ಅವಲಂಬಿಸಿದ್ದಾರೆ ಎಂಬುದನ್ನು ತಿಳಿಸುವ ಉದ್ದೇಶ ಹೊಂದಿದೆ.

## ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಒಂದು ಕ್ಷೇತ್ರ ನಿರ್ದಿಷ್ಟವಾದುದಾಗಿದೆ. ಕರ್ನಾಟಕ ರಾಜ್ಯದ್ಯಂತ ಬಹಳ ದಟ್ಟವಾಗಿ ಬೇಡ ಸಮುದಾಯ ನೆಲೆಸಿದೆ. ನನ್ನ ಅಧ್ಯಯನದ ಅವಧಿಯನ್ನು ಪರಿಗಣಿಸಿ ಕೇವಲ ಕೂಡ್ಲಿಗಿ ಪಟ್ಟಣದ ವ್ಯಾಪ್ತಿಯಲ್ಲಿ ಬರುವ ಬೇಡ ಸಮುದಾಯದವರ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ. ಈ ಅಧ್ಯಯನದಲ್ಲಿ ಕೂಡ್ಲಿಗಿ ಕ್ಷೇತ್ರ ವ್ಯಾಪ್ತಿಯಲ್ಲಿರುವ ಬೇಡರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಜೀವನ ಹಾಗೂ ಆಧುನಿಕ ಕಾಲಕ್ಕೆ ಹೊಂದಿಕೊಂಡಂತೆ ಇವರಲ್ಲಿ ಆದ ಕೆಲವು ಬದಲಾವಣೆ ಅಂಶಗಳ ಬಗ್ಗೆ ಸೂಕ್ಷ್ಮವಾಗಿ ಅವಲೋಕಿಸಿಲಾಗಿದೆ. ಈ ಕ್ಷೇತ್ರದಲ್ಲಿ ಇವರು ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದಾರೆ. ಕೂಡ್ಲಿಗಿ ತಾಲೂಕಿನಲ್ಲಿ ಬೇಡರು ಹೆಚ್ಚಾಗಿ ನೆಲೆಸಿದ್ದಾರೆ. ಅದೇ ರೀತಿ ಕೂಡ್ಲಿಗಿ ತಾಲೂಕು ಅತೀ ಹೆಚ್ಚು ಹಳ್ಳಿಗಳನ್ನೊಳಗೊಂಡ ಪ್ರದೇಶವಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಕೂಡ್ಲಿಗಿ ಪಟ್ಟಣವನ್ನು ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಪಟ್ಟಣದಲ್ಲಿ ನೆಲೆಸಿರುವ ಬೇಡರ ಸಮುದಾಯದವರ ಬಗ್ಗೆ ಅಧ್ಯಯನ ಮಾಡಲಾಗಿದೆ. ಈ ಪ್ರದೇಶದ ಪಟ್ಟಣ ಪಂಚಾಯ್ತಿ ವ್ಯಾಪ್ತಿಗೆ ೧೮ ವಿಭಾಗಗಳು ಬರುತ್ತವೆ. ಅದರಲ್ಲಿ ಬೇಡರ ಸಮುದಾಯದವರೂ ವಾಸಿಸುತ್ತಿದ್ದಾರೆ. ಇವರ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ.

## ಕ್ಷೇತ್ರ ಪರಿಚಯ

ಹೈದ್ರಾಬಾದ್ ಕರ್ನಾಟಕ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಬಳ್ಳಾರಿ ಜಿಲ್ಲೆಯ ತಾಲೂಕುಗಳಲ್ಲಿ ಒಂದಾಗಿರುವ ಕೂಡ್ಲಿಗಿ ಹಿಂದುಳಿದ ಪ್ರದೇಶವಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಬೆಳವಣಿಗೆ ಹಂತದಲ್ಲಿರುವ ತಾಲೂಕಾಗಿದೆ. ಪ್ರಸ್ತುತ ಅಧ್ಯಯನವನ್ನು ಕೂಡ್ಲಿಗಿ ಪಟ್ಟಣಕ್ಕೆ ಮಾತ್ರ ಸೀಮಿತಗೊಳಿಸಲಾಗಿದೆ. ''ಕೂಡ್ಲಿಗಿ ಪಟ್ಟಣ ಬಳ್ಳಾರಿ ಪಟ್ಟಣದಿಂದ ಸುಮಾರು ೮೦ ಕಿ.ಮೀ. ದೂರದಲ್ಲಿ ಪಶ್ಚಿಮಕ್ಕೆ ಇರುವುದು. ಬಳ್ಳಾರಿ ಜಿಲ್ಲೆಯ ೮ ತಾಲೂಕುಗಳಲ್ಲಿ ಇದು ಒಂದು. ಗುಡೇಕೋಟೆ, ಜರ್ಮಲಿ ಕೋಟೆಗಳು ಹಾಳಾದ ಮೇಲೆ ಅಲ್ಲಿ ವಾಸಿಸುತ್ತಿದ್ದ ಜನರು ಇಲ್ಲಿಗೆ ಬಂದು ಸೇರಿದರು. ಬೇಡ ಕೋಮಿನ ಜನಾಂಗ ಹೆಚ್ಚಾಗಿ ಇಲ್ಲಿ ಕಂಡುಬರುವುದು. ಈ ಪಟ್ಟಣಕ್ಕೆ ಇತಿಹಾಸದ ಮಹತ್ವವಿಲ್ಲ. ಈ ಪಟ್ಟಣದ ನೈರುತ್ಯ ದಿಕ್ಕಿನಲ್ಲಿ ಶ್ರೀ ಶಿದ್ದೇಶ್ವರಸ್ವಾಮಿಯ ದೇವಾಲಯವಿರುವುದು. ಗುಡೇಕೋಟೆ ಪ್ರದೇಶವೇ 'ಕೂಡಲಿಗಿ' ಎಂದಾಯಿತು ಎಂದು ಪೂರ್ವಜರು ಹೇಳುವರು. ಜನ ಬಂದು ಅಲ್ಲಿಗೆ ಕೂಡಿದ್ದರಿಂದ ಈ ಸ್ಥಳಕ್ಕೆ 'ಕೂಡಲಿಗೆ' ಎಂದು ಈಗ 'ಕೂಡ್ಲಿಗಿ' ಎಂದು ಕರೆಯಲಾಯಿತು.''[೧] ಕೂಡ್ಲಿಗಿ ತಾಲೂಕು ಒಟ್ಟು ೨,೧೯,೪೮೦ ಜನಸಂಖ್ಯೆ ಹೊಂದಿದೆ. ಅದರಲ್ಲಿ ನಾಯಕ ಸಮುದಾಯದವು ೫೩,೯೬೩ ರಷ್ಟಿದೆ. ಅದೇ ರೀತಿ ಕೂಡ್ಲಿಗಿ ಪಟ್ಟಣದಲ್ಲಿನ ಒಟ್ಟು ಜನಸಂಖ್ಯೆ ೨೧,೮೫೫ ಇದೆ. ಇದರಲ್ಲಿ ೬,೭೯೦ ಬೇಡ ಸಮುದಾಯದ ಜನರು ವಾಸಿಸುತ್ತಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಒಂದು ಪಟ್ಟಿಯನ್ನು ತಯಾರಿಸಲಾಗಿದೆ.

## ಕೂಡ್ಲಿಗಿ ತಾಲೂಕು ಹಾಗು ಕೂಡ್ಲಿಗಿ ಪಟ್ಟಣದ ಜನಸಂಖ್ಯಾ ವಿವರ

೧೯೯೧-೨೦೦೧ (ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ಪ್ರಕಾರ)

| ಕ್ರ.ಸಂ. | ವಿವರ | ಒಟ್ಟು | ಗಂಡು | ಹೆಣ್ಣು |
|---|---|---|---|---|
| ೧. | ಕೂಡ್ಲಿಗಿ ತಾಲೂಕಿನ ಜನಸಂಖ್ಯೆ (೧೯೯೧ ಅಂಕಿ ಅಂಶಗಳ ಪ್ರಕಾರ) | ೨,೧೯,೪೮೦ | ೧,೧೧,೮೧೯ | ೧,೦೭,೬೬೧ |
| | ಬೇಡ ಸಮುದಾಯದ ಜನಸಂಖ್ಯೆ | ೫೩,೯೬೩ | ೨೭,೦೯೭ | ೨೬,೮೭೨ |
| ೨. | ಕೂಡ್ಲಿಗಿ ಪಟ್ಟಣ ವ್ಯಾಪ್ತಿಯಲ್ಲಿನ ಜನಸಂಖ್ಯೆ (೨೦೦೧ ಅಂಕಿ ಅಂಶಗಳ ಪ್ರಕಾರ) | ೨೧,೮೫೫ | ೧೧,೦೭೭ | ೧೦,೭೭೮ |
| | ಬೇಡ ಸಮುದಾಯದ ಜನಸಂಖ್ಯೆ | ೬,೭೯೦ | ೩೧೮೦ | ೩೬೧೦ |

ಕೂಡ್ಲಿಗಿಯ ಸುತ್ತ ಇತಿಹಾಸದಲ್ಲಿ ದಾಖಲಾಗಿರುವ ಹಲವು ಪಾಳೆಯಗಾರರ ಸಂಸ್ಥಾನಗಳಿವೆ. ಈ ತಾಲೂಕು ಸಾರಿಗೆ ವ್ಯವಸ್ಥೆಯ ದೃಷ್ಠಿಯಿಂದ ನೋಡಿದಾಗ ಒಂದು ರೀತಿಯಲ್ಲಿ ಕೇಂದ್ರವಾಗಿರುವಂತಿದೆ. ಅಂದರೆ ಈ ಊರಿನಿಂದ ಬಳ್ಳಾರಿ, ಹರಿಹರ, ಚಿತ್ರದುರ್ಗ, ರಾಯದುರ್ಗ ಇವು ಸುಮಾರು ೮೦ ಕಿ.ಮೀ. ದೂರದಲ್ಲಿವೆ. ಅದೇ ರೀತಿ ಹೊಸಪೇಟೆ, ಸಂಡೂರು, ಹರಪನಹಳ್ಳಿ ಮೊದಲಾದ ಪ್ರದೇಶಗಳು ಕೂಡ್ಲಿಗಿಯಿಂದ ೪೦-೫೦ ಕಿ.ಮೀ. ದೂರದಲ್ಲಿವೆ. ಒಂದು ಕಾಲದಲ್ಲಿ ವಿಜಯನಗರ ಅರಸರ ಅಧೀನಕ್ಕೆ ಒಳಪಟ್ಟಿತ್ತೆಂದು ಹಿರಿಯರ ಅಭಿಪ್ರಾಯವಾಗಿದೆ.

### ಗುಡೇಕೋಟೆ ಪಾಳೆಯಗಾರರು

"ಗುಡೇಕೋಟೆ ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲೂಕಿನಲ್ಲಿದೆ. ಈ ರಾಜ್ಯ ೧೬ನೇ ಶತಮಾನದಲ್ಲಿ ಸ್ಥಾಪನೆಯಾಯಿತು. ಈ ಅರಸರು ಬೇಡ ಕುಲಕ್ಕೆ ಸೇರಿದವರು. ಗುಡೇಕೋಟೆಯ ನಾಯಕನ ಪುತ್ರಿ 'ಬಂಗಾರವ್ವ ನಾಗತಿ' ಎಂಬುವಳನ್ನು ಚಿತ್ರದುರ್ಗದ ಭರ್ಮಪ್ಪ ನಾಯಕನಿಗೆ ಕೊಟ್ಟು ವಿವಾಹ ನೆರವೇರಿಸಿದರು. ಗುಡೇಕೋಟೆ ಪಾಳೇಗಾರನು ಚಿತ್ರದುರ್ಗ ನಾಯಕರಿಗೆ ಯುದ್ಧದಲ್ಲಿ ಸಹಾಯ ಮಾಡುತ್ತಿದ್ದನು. ಗುಡೇಕೋಟೆ ನಾಯಕನ ಮನೆಯಲ್ಲಿ ಹರಪನಹಳ್ಳಿ ನಾಯಕರು ಕೆಲ ಸ್ತ್ರೀಯರನ್ನು ಲಗ್ನವಾಗಿದ್ದರು. ಕ್ರಿ.ಶ. ೧೭೭೭ರಲ್ಲಿ ಹೈದರಾಲಿ ದಾಳಿ ಮಾಡಿದನು. ಆಗ ಈ ಕೋಟೆ ಹಾಳಾಯಿತು"[೨] ಎಂದು ಉಲ್ಲೇಖಿಸಲಾಗಿದೆ. ಇದರಿಂದ ಕೂಡ್ಲಿಗಿ ತಾಲೂಕಿನಲ್ಲಿ ಅನೇಕ ವರ್ಷಗಳಿಂದಲೂ ಬೇಡರು ವಾಸಿಸುತ್ತಿದ್ದರು. ಸುತ್ತಲೂ ಬೇಡರ ಪಾಳೆಯ ಪಟ್ಟುಗಳಿವೆ ಎಂಬುದನ್ನು ತಿಳಿದುಕೊಳ್ಳಬಹುದು.

### ಜರ್ಮಲಿ ಪಾಳೇಗಾರರು

"ಕೂಡ್ಲಿಗಿ ಪಟ್ಟಣಕ್ಕೆ ಬಹಳ ಹತ್ತಿರವಾದ ಹಳ್ಳಿ ಜರ್ಮಲಿ. ಒಮ್ಮೆ ಇದು ವಿಜಯನಗರಕಾಲದ ಅರಸರ ಆಡಳಿತಕ್ಕೆ ಒಳಪಟ್ಟಿತೆಂಬ ಪ್ರತೀತಿ ಇದೆ. ಇದಕ್ಕೆ ಕುಂಬಾಸ ಅವರು 'ಜರ್ಮಲಿ' ಎಂಬುವ ಹಳ್ಳಿ ಈಗ ಕೂಡ್ಲಿಗಿ ತಾಲೂಕಿನಲ್ಲಿದೆ. ಈ ರಾಜ್ಯವನ್ನು ಸ್ಥಾಪನೆ ಮಾಡಿದವನು ಪೆನ್ನಪ್ಪನೆಂಬುವನು. ವಿಜಯನಗರದ

ಅಚ್ಯುತರಾಯನು ತನ್ನಲ್ಲಿ ನಿಷ್ಠೆಯಿಂದ ಕೆಲಸ ಮಾಡಿದುದಕ್ಕಾಗಿ ಪೆನ್ನಪ್ಪನಿಗೆ ಜರ್ಮಲಿ ರಾಜ್ಯ ಬಹುಮಾನವಾಗಿ ಕೊಟ್ಟನು'' ಎಂದು ವಿವರಿಸಲಾಗಿದೆ.

## ಉಜ್ಜಿನಿ

ಉಜ್ಜಿನಿ ಗ್ರಾಮ ಕೂಡ್ಲಿಗಿ ತಾಲೂಕಿನ ವ್ಯಾಪ್ತಿಗೆ ಒಳಪಟ್ಟಿದೆ. ಕೂಡ್ಲಿಗಿ ಪಟ್ಟಣದಿಂದ ಸುಮಾರು ೨೫ ಕಿ.ಮೀ. ದೂರದಲ್ಲಿದೆ. ಇಲ್ಲಿ ಬಹಳ ಪುರಾತನ ಕಾಲದಿಂದಲೂ ಇರುವ ದೇವಾಲಯಗಳಿವೆ. ಮರುಳಸಿದ್ದೇಶ್ವರ ಗುಡಿ ಸಹ ಇದೆ.

ಕೂಡ್ಲಿಗಿ ಪಟ್ಟಣದಲ್ಲಿ ಬರುವ ರಾಷ್ಟ್ರೀಯ ಹೆದ್ದಾರೆ ಸಂಖ್ಯೆ ೧೩ರ ಪಕ್ಕದಲ್ಲಿ, ನೈರುತ್ಯ ದಿಕ್ಕಿಗೆ ಶ್ರೀ ಸಿದ್ದೇಶ್ವರ ಬೆಟ್ಟ ಇದೆ. ಇಲ್ಲಿ ಶಿವಲಿಂಗವಿದೆ. ಈ ದೇವಸ್ಥಾನದಲ್ಲಿ ವರ್ಷಕ್ಕೊಮ್ಮೆ ಮಹಾಶಿವರಾತ್ರಿಯ ದಿನ ವಿಶೇಷ ಪೂಜೆ ಸಲ್ಲಿಸುತ್ತಾರೆ. ಈ ಗುಡ್ಡಕ್ಕೆ ಐತಿಹಾಸಿಕ ಹಿನ್ನೆಲೆಯಿದೆ. ಹಾಗೇ ಮುಂದೆಬಂದರೆ ಒಂದು ದೊಡ್ಡ ಆಲದ ಮರವಿದೆ. ಅದರಲ್ಲಿ ಭೂಮಿಯಿಂದ ಹೊರಹೊಮ್ಮಿರುವ ಒಂದು ಹೆಣ್ಣು ದೇವತೆಯ ವಿಗ್ರಹವಿದೆ. ಅದಕ್ಕೆ ಸೊಲ್ಲಮ್ಮ ದೇವತೆ ಎಂಬ ಹೆಸರಿನಿಂದ ಕರೆಯುತ್ತಾರೆ. ಆ ದೊಡ್ಡ ಆಲದ ಮರಕ್ಕೆ ಅಂಟಿಕೊಂಡು ನಾಲ್ಕೈದು ಆಲದ ಮರಗಳು ಬೆಳೆದಿವೆ. ಈ ದೇವತೆಗೆ ವರ್ಷಕ್ಕೊಮ್ಮೆ ಜಾತ್ರೆ ಮಾಡಿ ಬೇಟೆ ಕಡಿಯುವ ಪದ್ಧತಿಯಿದೆ. ಇದನ್ನು ಕೆಲವರು ಲಕ್ಷ್ಮಿ ಎಂತಲೂ ಕರೆಯುತ್ತಾರೆ. ಈ ದೇವತೆ ಸೊನ್ನದಿಂದ ಬಂದವಳೆಂಬ ಪ್ರತೀತಿ ಇದೆ. ಆಲದ ಮರಕ್ಕೆ ಸೊಲ್ಲಮ್ಮನ ಮರ ಎಂದು ಕರೆಯುತ್ತಾರೆ. ಈ ಪಟ್ಟಣದಲ್ಲಿ ಕೆಲವು ವರ್ಷಗಳ ಹಿಂದೆಯಷ್ಟೇ ನಿರ್ಮಿಸಿರುವ ಶ್ರೀ ವೆಂಕಟೇಶ್ವರ ದೇವಸ್ಥಾನವಿದೆ. ಪುರಾತನ ಕಾಲದ ಕೆಲವು ದೇವಾಲಯಗಳು ಹಾಗೂ ಕೆಲವು ಬಾವಿಗಳು ಈ ಊರಿನಲ್ಲಿ ಕಂಡುಬರುತ್ತವೆ.

ಇದಕ್ಕೂ ಮೊದಲು ಕೂಡ್ಲಿಗಿ ಆಂಧ್ರಪ್ರದೇಶದ ವ್ಯಾಪ್ತಿಗೆ ಒಳಪಟ್ಟಿತ್ತೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹಾಗೂ ವಿಜಯನಗರ ಕಾಲದಲ್ಲಿ ಈ ಪ್ರದೇಶದ ಜನರು ಆ ಸಂಸ್ಥಾನದಲ್ಲಿ ಸೈನಿಕ ವೃತ್ತಿಗಳನ್ನು ಮಾಡುತ್ತಿದ್ದರು ಎಂಬುದಾಗಿ ಕೆಲವರ ಅಭಿಪ್ರಾಯವಾಗಿದೆ. ನಂತರ ಅಲ್ಲಿಂದ ಬಂದ ಬೇಡರು ನೇರವಾಗಿ ಕೂಡ್ಲಿಗಿಗೆ ಬಂದು ನೆಲೆಸಿದರು ಎಂದು ಹೇಳಲಾಗಿದೆ. ಕೂಡ್ಲಿಗಿ ಪಟ್ಟಣದ ಬಗೆಗೆ ಬಳ್ಳಾರಿ ಗ್ಯಾಜೆಟಿಯರ್ ನಲ್ಲಿ ಈ ಮುಂದಿನಂತೆ ಉಲ್ಲೇಖಿಸಲಾಗಿದೆ.

"Kudligi is the head quarters of taluk Kudligi the Some name and has a muncipality. It is Situated at a distance of about 80 K.M. from Bellary city the old town has narrow and ill made lanes. There are now three well laid out extension on a rock south west of the town. the festivals of village godess was formely a very popular. event with the local people. The place is having a high school and Banking fecilities"[೬]

ಕೂಡ್ಲಿಗಿ ತಾಲೂಕು ಕೇಂದ್ರವಾಗಿರುವುದರಿಂದ ಇಲ್ಲಿ ಬ್ರಿಟೀಷರ ಕಾಲದಲ್ಲಿ ನಿರ್ಮಿಸಿರುವ ಕಟ್ಟಡಗಳು ಇವೆ. ಅವುಗಳಲ್ಲಿ ತಾಲೂಕು ಕಛೇರಿ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕೋರ್ಟು ಮೊದಲಾವುಗಳಾಗಿವೆ. ಈ ಪಟ್ಟಣದಲ್ಲಿರುವ ಒಂದು ವಿಶೇಷತೆ ಎಂದರೆ ಒಂದನೇ ವಾರ್ಡು ಬಾಪೂಜಿ ನಗರದಲ್ಲಿರುವ

ಮಹಾತ್ಮಗಾಂಧೀಜಿ ಚಿತಾಭಸ್ಮ ಇರುವುದು. ಈ ಪಟ್ಟಣದಲ್ಲಿ ಇಂದು ವಿವಿಧ ರೀತಿಯ ಕಛೇರಿ ಹಾಗೂ ಉತ್ತಮ ಸೌಲಭ್ಯವಿರುವ ಸಾರಿಗೆ ವ್ಯವಸ್ಥೆ ಇದೆ. ಇದರ ಪಕ್ಕದಲ್ಲೇ ರಾಷ್ಟ್ರೀಯ ಹೆದ್ದಾರಿ ನಂ.೧೩ ಹಾದುಹೋಗುತ್ತದೆ. ಕೆಲವು ದಿನಗಳ ಹಿಂದೆಯಷ್ಟೇ ಇಲ್ಲಿ ದೂರದರ್ಶನ ಕೇಂದ್ರ ನಿರ್ಮಿಸಿರುತ್ತಾರೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೂಡ್ಲಿಗಿಯಲ್ಲಿ ಸುಮಾರು ೨೦-೨೧ ಪ್ರಾಥಮಿಕ ಶಾಲೆಗಳು, ೩ ಪದವಿಪೂರ್ವ ಕಾಲೇಜು ಹಾಗೂ ಒಂದು ಸರ್ಕಾರಿ ಪದವಿ ಕಾಲೇಜು ಇದೆ. ಅಗ್ನಿಶಾಮಕ ಸೇವೆ, ಪೋಲೀಸ್ ಠಾಣೆ, ಅಂಚೆಕಛೇರಿಗಳು ಇವೆ. ಕೂಡ್ಲಿಗಿ ಜನರು ಹೆಚ್ಚಾಗಿ ಕೃಷಿ ಅವಲಂಬಿಸಿದ್ದಾರೆ. ಕೃಷಿಗೆ ಸಂಬಂಧಿಸಿದಂತೆ ಇದು ಕಪ್ಪುಮಿಶ್ರಿತ ಕೆಂಪು ಮಣ್ಣಿನಿಂದ ಕೂಡಿದ ಪ್ರದೇಶವಾಗಿದೆ. ಇಲ್ಲಿನ ಜನರು ಹೆಚ್ಚಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ವ್ಯವಸಾಯಕ್ಕೆ ಸಂಬಂಧಿಸಿದ ಕೆಲಸಗಳಿಲ್ಲದಿದ್ದಾಗ ಕೃಷಿಯೇತರ ಕೂಲಿ ಕೆಲಸಗಳನ್ನು ಮಾಡುತ್ತಾರೆ. ವ್ಯವಹಾರದಲ್ಲಿ ಈ ಊರು ಅಷ್ಟಾಗಿ ಮುಂದುವರೆದಿಲ್ಲ. ಸರ್ಕಾರಿ ಹುದ್ದೆಗಳಲ್ಲಿ ಇಲ್ಲಿಯ ಜನರ ಪಾತ್ರ ಇದೆ. ಶಿಕ್ಷಣ ಹಾಗೂ ರಾಜಕೀಯದಲ್ಲಿ ಬೆಳವಣಿಗೆ ಹೊಂದಿರುವ ಪ್ರದೇಶವಾಗಿದೆ.

ಪಟ್ಟಣ ಪಂಚಾಯ್ತಿ ವ್ಯಾಪ್ತಿಯಲ್ಲಿ ಈ ಊರಿನಲ್ಲಿ ೧೮ ಡಿವಿಜನ್‌ಗಳು ಇವೆ. ಇದರಲ್ಲಿ ಮೂರು ಡಿವಿಜನ್‌ಗಳು ಹಳ್ಳಿಗಳಾಗಿವೆ. ಇದರಲ್ಲಿ ೧, ೨, ೩, ೪, ೫ನೇ ವಾರ್ಡ್‌ಗಳಲ್ಲಿ ಬೇಡರ ಸಂಖ್ಯೆ ಸ್ವಲ್ಪ ಕಡಿಮೆ ಇದೆ. ಉಳಿದಂತೆ ೬,೭,೮ ರಿದಂ ೧೫ರವರೆಗಿನ ಡಿವಿಜನ್‌ಗಳಲ್ಲಿ ಬೇಡರ ಸಂಖ್ಯೆ ಅಧಿಕವಾಗಿದೆ. ಇದರ ವ್ಯಾಪ್ತಿಯಲ್ಲಿ ಬರುವ ಗೋವಿಂದಗಿರಿ ತಾಂಡ ಹಾಗೂ ಗೊಲ್ಲರ ಹಟ್ಟಿಗಳಲ್ಲಿ ಬೇಡರು ವಿರಳವಾಗಿ ಕಂಡುಬರುತ್ತಾರೆ. ಇನ್ನೊಂದು ವಿಶೇಷತೆ ಎಂದರೆ ಕೆರೆಕಾವಲರ ಹಟ್ಟಿ ಎಂಬ ಹಳ್ಳಿಯಲ್ಲಿ ಕೇವಲ ಊರುಬೇಡರು ಮಾತ್ರ ನೆಲೆಸಿದ್ದಾರೆ. ಅವರ ಮಧ್ಯೆ ಕೇವಲ ಒಂದು ಅಥವ ಎರಡು ಕುಟುಂಬಗಳು ಮಾತ್ರ ಮ್ಯಸಬೇಡರ ಕುಟುಂಬಗಳಾಗಿವೆ.

## ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನವನ್ನು ನಿಗದಿತ ಕಾಲಾವಧಿಗೆ ಅನುಗುಣವಾಗಿ ಬೇಡರು ಹೆಚ್ಚಾಗಿ ನೆಲೆಸಿರುವ ಕೂಡ್ಲಿಗಿ ಪಟ್ಟಣವನ್ನು ಮಾತ್ರ ಸೀಮಿತಗೊಳಿಸಲಾಗಿದೆ. ಈ ಅದ್ಯಯನದಲ್ಲಿ ಮುಖ್ಯವಾಗಿ ಕ್ಷೇತ್ರಕಾರ್ಯದಿಂದ ಬಂದಂತಹ ಮಾಹಿತಿಗಳನ್ನು ವಿಶ್ಲೇಷಿಸಲಾಗಿದೆ. ಹಾಗೂ ಇದುವರೆಗೂ ನಡೆದಿರುವ ಕೆಲವು ಅಧ್ಯಯನಗಳನ್ನು ನೋಡಿ ಅವುಗಳಿಂದ ಕೆಲವು ವಿಷಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಅಗತ್ಯವಿದ್ದಲ್ಲಿ ಈ ಕೆಳಗೆ ಕಾಣಿಸಿರುವ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ.

### ಸಂದರ್ಶನ ವಿಧಾನ

ಈ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಕೂಡ್ಲಿಗಿ ಪ್ರದೇಶದಲ್ಲಿ ದಟ್ಟವಾಗಿ ನೆಲೆಸಿರುವ ಬೇಡ ಸಮುದಾಯವನ್ನು ಆಯ್ಕೆ ಮಾಡಿಕೊಂಡು, ಕೂಡ್ಲಿಗಿ ಪಟ್ಟಣಪಂಚಾಯ್ತಿ ವ್ಯಾಪ್ತಿಯಲ್ಲಿ ಬರುವ ಹದಿನೆಂಟು ವಾರ್ಡ್‌ಗಳು ಅಥವಾ ಡಿವಿಜನ್‌ಗಳಲ್ಲಿ ಮೂರರಿಂದ ನಾಲ್ಕು ಜನರಂತೆ ಭೇಟಿ ನೀಡಿ ಅವರಿಂದ ದೊರೆತ ಮಾಹಿತಿಗಳನ್ನು ವಿಶ್ಲೇಷಿಸಲಾಗಿದೆ. ಈ ಪ್ರದೇಶದಲ್ಲಿ ಈ ಸಮುದಾಯದ ಜನರು ದಟ್ಟವಾಗಿ ನೆಲೆಸಿರುವುದರಿಂದಾಗಿ ಮಾದರಿ ಸಮೀಕ್ಷೆ ನಡೆಸಲಾಗಿದೆ. ಪ್ರತಿಯೊಂದು ಡಿವಿಜನ್‌ನಲ್ಲಿಯೂ

ವಯೋಮಿತಿಗನುಸಾರವಾಗಿ ಹಾಗೂ ಮಹಿಳೆಯರನ್ನು ಕೂಡ ಗಣನೆಗೆ ತೆಗೆದುಕೊಂಡು ಸಂದರ್ಶನ ನಡೆಸಲಾಗಿದೆ. ಜೊತೆಗೆ ಯುವ ಸಮೂಹ, ವಾಲ್ಮೀಕಿ ಸಂಘ, ಉಳಿತಾಯ ಸಂಘ ಮೊದಲಾದ ಸಂಘ ಸಂಸ್ಥೆಗಳಲ್ಲಿ ಇರುವ ಬೇಡ ಸಮುದಾಯದ ವ್ಯಕ್ತಿಗಳನ್ನು ಸಂದರ್ಶಿಸಿ ಮಾಹಿತಿಗಳನ್ನು ಕಲೆ ಹಾಕಲಾಗಿದೆ.

### ಪ್ರಶ್ನಾವಳಿ ವಿಧಾನ

ಅಧ್ಯಯನದ ವಿಷಯಕ್ಕನುಗುಣವಾಗಿ ಕೆಲವು ಸೂಕ್ತವಾಗಿರುವ ಪ್ರಶ್ನಾವಳಿಗಳನ್ನು ರಚಿಸಿಕೊಂಡು ವಕ್ತೃಬಳಿ ನೇರವಾಗಿ ಭೇಟಿ ನೀಡಲಾಗಿದೆ. ಹಾಗೂ ಈ ಪ್ರಶ್ನೆಗಳನ್ನು ಅವರಿಗೆ ಕೇಳುವುದರ ಮೂಲಕವಾಗಿ ಅವರಿಂದ ಬಂದಿರುವ ಅಭಿಪ್ರಾಯಗಳನ್ನು ಒಂದೆಡೆ ಕಲೆಹಾಕಿ ಅವುಗಳಲ್ಲಿ ಈ ವಿಷಯಕ್ಕೆ ಸರಿಹೊಂದುವಂತಹ ಮಾಹಿತಿಯನ್ನು ವಿಶ್ಲೇಷಿಸಿ, ಅಧ್ಯಯನದಲ್ಲಿ ನಮೂದಿಸಲಾಗಿದೆ. ಈ ಪ್ರಶ್ನೆಗಳು ಅವರ ವಯೋಮಾನಕ್ಕೆ ಅನುಗುಣವಾಗಿ ಹಾಗೂ ಮಹಿಳೆಯರಿಗೆ ಹಾಗೂ ಇತರೆ ಸದಸ್ಯರಿಗೆ ಪ್ರತ್ಯೇಕವಾಗಿರುವಂತಹ ಪ್ರಶ್ನೆಗಳನ್ನು ರಚಿಸಿ ಅವುಗಳಿಂದ ಬಂದ ಉತ್ತರಗಳನ್ನು ಹಾಗೂ ಕೆಲವು ಅಭಿಪ್ರಾಯಗಳನ್ನು ವಿಶ್ಲೇಷಿಸಲಾಗಿದೆ. ಬೇಡರ ಸಾಮಾಜಿಕ ವ್ಯವಸ್ಥೆ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಅಂಶಗಳಿಗೆ ಸಂಬಂಧಿಸಿದಂತಹ ಪ್ರಶ್ನೆಗಳನ್ನು ರಚಿಸಿ ಅವುಗಳಿಂದ ಬಂದ ಮಾಹಿತಿಗಳನ್ನು ಪ್ರತ್ಯೇಕಿಸಿ ಅಧ್ಯಯನದ ವಿಷಯದಲ್ಲಿ ಅಳವಡಿಸಿಕೊಳ್ಳಲಾಗಿದೆ.

### ಅವಲೋಕನ ವಿಧಾನ

ಈ ಅಧ್ಯಯನದಲ್ಲಿ ಅವಲೋಕನ ವಿಧಾನಕ್ಕೆ ಹೆಚ್ಚು ಆದ್ಯತೆ ನೀಡಲಾಗಿದೆ. ಬೇಡರಲ್ಲಿ ಇತ್ತೀಚೆಗೆ ಆಗಿರುವಂತಹ ಬದಲಾವಣೆಗಳ ಬಗೆಗೆ ಸೂಕ್ಷ್ಮವಾಗಿ ಅವಲೋಕಿಸಿ ಅವುಗಳನ್ನು ವಿಶ್ಲೇಷಿಸಲಾಗಿದೆ. ಬೇಡರ ಜೀವನಕ್ರಮ ಅವರ ಸಾಂಸ್ಕೃತಿಕ ಜೀವನ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಅವಲೋಕನೆ ಮಾಡಿ ಅದರಿಂದ ತಿಳಿದ ಕೆಲವು ಮಾಹಿತಗಳನ್ನು ಬಳಸಿಕೊಳ್ಳಲಾಗಿದೆ. ಇದು ಒಂದು ರೀತಿಯ ಅಸಹಭಾಗಿ ಅವಲೋಕನ ವಿಧಾನವಾಗಿದೆ ಎಂದು ಹೇಳಬಹುದು. ಬೇಡರಲ್ಲಿ ಇತ್ತೀಚೆಗೆ ಆಗಿರುವಂತಹ ಬದಲಾವಣೆಗಳನ್ನು ಅತೀ ಸೂಕ್ಷ್ಮವಾಗಿ ಅವಲೋಕಿಸಿ ಇದರಿಂದ ಬಂದ ಅಂಶಗಳನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

### ಸಂಖ್ಯಾಶಾಸ್ತ್ರದ ಬಳಕೆ

ಬೇಡ ಸಮುದಾಯಕ್ಕೆ ಸೇರಿದ ಜನರ ಕ್ಷೇತ್ರವಾರು ವಿವರಣೆ ಜನಸಂಖ್ಯೆ ಇವರ ಶೈಕ್ಷಣಿಕಮಟ್ಟ ಹಾಗೂ ಆರ್ಥಿಕ ಜೀವನಕ್ಕೆ ಸಂಬಂಧಿಸಿದಂತಹ ವಿಷಯಗಳನ್ನು ತಿಳಿಸಲು ಇದಕ್ಕೆ ಸಂಬಂಧಿಸಿದ ಹಾಗೂ ಸೂಕ್ತವಾಗಿರುವಂತಹ ಅಂಕಿ ಸಂಖ್ಯೆಗಳನ್ನು ಬಳಸಿಕೊಳ್ಳಲಾಗಿದೆ. ಅಗತ್ಯವಿದ್ದಲ್ಲಿ ಕೆಲವು ವಿವರಣೆಗಳನ್ನು ಪಟ್ಟಿ ಮೂಲಕ ವಿವರಿಸಲಾಗಿದೆ.

## ಛಾಯಾಚಿತ್ರಗಳ ಬಳಕೆ

ಅಧ್ಯಯನಕ್ಕೆ ಸಂಬಂಧಿಸಿದಂತೆ ಬೇಡ ಸಮುದಾಯದಲ್ಲಿ ಆಗಿರುವ ಕೆಲವು ಪರಿವರ್ತನೆಗಳ ಬಗ್ಗೆ ನಿಖರವಾಗಿ ತಿಳಿಸಲು ಅಗತ್ಯವಿದ್ದಲ್ಲಿ ಛಾಯಾಚಿತ್ರಗಳನ್ನು ಸಂಗ್ರಹಿಸಲಾಗಿದೆ. ಇವರ ಸಾಮಾಜಿಕ ಸಂಸ್ಥೆ, ಕಸುಬು ಹಾಗೂ ವೃತ್ತಿಗಳಲ್ಲಿ ಆಗಿರುವ ಬದಲಾವಣೆಗಳನ್ನು ಛಾಯಾಚಿತ್ರಗಳ ಮೂಲಕ ತೋರಿಸಲಾಗಿದೆ.

ಬೇಡರ ಸಮುದಾಯದ ವ್ಯಕ್ತಿಗಳನ್ನು ಭೇಟಿ ನೀಡಿ ವಕ್ತೃಗಳು ನೀಡಿರುವ ಮಾಹಿತಿಗಳನ್ನು ಧ್ವನಿಮುದ್ರಕದ ಮೂಲಕ ಸಂಗ್ರಹಿಸಲಾಗಿದೆ. ಅವುಗಳಿಗೆ ಸಂಬಂಧಿಸಿದಂತೆ ವಕ್ತೃಗಳು ನೀಡಿರುವ ಮಾಹಿತಿಗಳನ್ನು ಪ್ರತ್ಯೇಕಿಸಿ ಅವಶ್ಯವಿದ್ದೆಡೆ ಅವರು ನೀಡಿರುವ ಹೇಳಿಕೆಗಳನ್ನು ಅವರು ಹೇಳಿದ ರೀತಿಯಲ್ಲೇ ಉಲ್ಲೇಖಿಸಲಾಗಿದೆ. ಅಗತ್ಯವಿದ್ದೆಡೆ ಕೆಲವು ಛಾಯಾಚಿತ್ರಗಳನ್ನು ಸಂಪ್ರಬಂಧಕ್ಕೆ ಅವಳವಡಿಸಲಾಗಿದೆ. ಒಟ್ಟಾರೆ ಈ ವಿಷಯಕ್ಕೆ ಸಂಬಂಧಿಸಿದ ಅಗತ್ಯ ಮಾಹಿತಿಗಳನ್ನು ಸಂಗ್ರಹಿಸಿ ಅವುಗಳನ್ನು ವಿಶ್ಲೇಷಿಸಿ ರಚಿಸಿದ ಒಂದು ಸಂಪ್ರಬಂಧವಾಗಿದೆ.

## ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

ಭಾರತದಲ್ಲಿ ಬ್ರಿಟೀಷರ ಆಳ್ವಿಕೆ ಕಾಲದಿಂದಲೂ ಬುಡಕಟ್ಟುಗಳ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಅದರಂತೆ ಬೇಡರಿಗೆ ಸಂಬಂಧಿಸಿದಂತೆ ಹಲವಾರು ವಿದ್ವಾಂಸರು ಸಾಕಷ್ಟು ಅಧ್ಯಯನಗಳನ್ನು ನಡೆಸಿದ್ದಾರೆ. ಬುಡಕಟ್ಟು ಜನರಿಗೆ ಸಂಬಂಧಿಸಿದಂತೆ ಬ್ರಿಟೀಷರ ಕಾಲದಲ್ಲಿಯೇ ಎಡ್ಗರ್ ಥರ್ಸ್‌ಟನ್ , ವೆರಿಯರ್ ಎಲ್ವಿನ್ ಮೊದಲಾದ ಮಹಾನ್ ವಿದ್ವಾಂಸರು ಅಧ್ಯಯನ ಕೈಗೊಂಡು ಸಮುದಾಯಗಳ ಅಸ್ತಿತ್ವವನ್ನು ಸಮಾಜಕ್ಕೆ ತಿಳಿಸಿಕೊಟ್ಟಿದ್ದಾರೆ. ಬ್ರಿಟೀಷರ ಆಳ್ವಿಕೆಯಲ್ಲಿ ನಡೆದ ಬುಡಕಟ್ಟುಗಳ ಅಧ್ಯಯನದಲ್ಲಿ ಬೇಡರ ಬಗ್ಗೆ ಮಾಹಿತಿ ದೊರೆಯುತ್ತದೆ. ಸರ್ ಥಾಮಸ್ ಮನ್ರೋ, ಕೆಲ್‌ಶೆಲ್, ರಾಬರ್ಟ್ ಸಿವೆಲ್, ಫ್ರಾನ್ಸಿಸ್ ಮೊದಲಾದವರು ಬೇಡರ ಬಗೆಗೆ ಮಾಹಿತಿ ನೀಡಿದ್ದಾರೆ. ಇವರಲ್ಲದೆ ಮೊದಲೇ ತಿಳಿಸಿರುವ ಹಾಗೆ ಎಡ್ಗರ್ ಥರ್ಸಟನ್, ರಂಗಚಾರಿ ಅವರು 'ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ' (೧೯೦೦) ಕೃತಿಯಲ್ಲಿ ಇತರೆ ಜಾತಿಗಳ ಜೊತೆಗೆ ಬೇಡರ ಅಸ್ತಿತ್ವದ ಬಗ್ಗೆ ಸ್ಥೂಲವಾಗಿ ವಿವರಿಸಿದ್ದಾರೆ. ಇವರು ಕರ್ನಾಟಕ ಆಂಧ್ರ ಭಾಗಗಳಲ್ಲಿನ ಬೇಡ ಅಥವಾ ಬೋಯಗಳ ಬಗ್ಗೆ ಜನಾಂಗಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಬೆಳಕು ಚೆಲ್ಲುತ್ತಾರೆ. ಇವರ ನಂತರ ಎಲ್.ಕೆ.ಅನಂತಕೃಷ್ಣ ಅಯ್ಯರ್ 'ಮೈಸೂರು ಕ್ಯಾಸ್ಟ್ ಅಂಡ್ ಟ್ರೈಬ್ಸ್' (ವಾ-೨) ೧೯೬೮ರಲ್ಲಿ ಬೇಡರ ಜನಾಂಗದ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಸೈಯದ್ ಸಿರಾಜ್ ಉಲ್ ಹಸನ್ 'ದಿ ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಎಚ್.ಇ.ಎಚ್.ದಿ ನಿಜಾಮ್ಸ ಡೋಮಿನಿಯನ್ಸ್' (೧೯೨೦) ಕೃತಿಯಲ್ಲಿ ಬೇಡರ ಬದುಕಿನ ಬಗ್ಗೆ ವಿವರಿಸಿದ್ದಾರೆ.

ಇನ್ನು ದೇಶೀ ನೆಲೆಯಲ್ಲಿ ಬೇಡ ಜನಾಂಗದ ಪೌರಾಣಿಕ, ಐತಿಹಾಸಿಕ ಸಂಗತಿಗಳ ಬಗ್ಗೆ ಹರ್ತಿಕೋಟೆಯ ವೀರನಾಯಕ 'ಕ್ಷಾತ್ರಾಂಶ ಪ್ರಬೋಧ' (೧೯೪೮) ಎಂಬ ಕೃತಿಯಲ್ಲಿ ತಿಳಿಸಿದ್ದಾರೆ. ಅದೇ ರೀತಿ ಚಳ್ಳಕೆರೆಯ ಆರ್.ರಾಜಣ್ಣನವರು 'ನಾಯಕ ಜನಾಂಗದ ಇತಿಹಾಸ' (೧೯೮೨) ಎಂಬ ಕೃತಿಯಲ್ಲಿ ಬೇಡರ ಸಾಂಸ್ಕೃತಿಕ ಇತಿಹಾಸದ ಬಗ್ಗೆ ವಿವರಿಸಿದ್ದಾರೆ. ಬೇಡ ಜನಾಂಗದ ಲಕ್ಷಣಗಳನ್ನು ಡಿ.ಬಿ.ಥಂಗ ಅವರು 'ಜನಾಂಗ ಪರಿಚಯ' ಎಂಬ ಪುಸ್ತಿಕೆಯಲ್ಲಿ ತಿಳಿಸಿದ್ದಾರೆ. ಬೇಡರ ಮೂಲ, ವಿಸ್ತರಣೆ, ಪರಂಪರೆ ಇತ್ಯಾದಿಗಳ ಬಗ್ಗೆ ವಿ.ರಂಗನಾಯಕ

'ವಾಲ್ಮೀಕಿ ವಂಶ ಪಾವನಿ' ಲೇಖನ ಹಾಗೂ ರೇವಣಸಿದ್ಧಶಾಸ್ತ್ರಿಗಳ 'ವಾಲ್ಮೀಕಿ ಪುರಾಣ'ಗಳು ತಿಳಿಸುತ್ತವೆ. ಇವುಗಳಲ್ಲದೆ ಎಂ.ಜಿ.ಈಶ್ವರಪ್ಪನವರ 'ಮ್ಯಾಸಬೇಡರು' (೧೯೮೨) ಕೃತಿ ಹಾಗೂ ಡಾ.ಕೃಷ್ಣಮೂರ್ತಿ ಹನೂರು ಅವರ 'ಮ್ಯಾಸಬೇಡರ ಸಂಸ್ಕೃತಿ' (೧೯೯೩) ಇವೆರಡು ವಿಶೇಷವಾಗಿ ಚಿತ್ರದುರ್ಗ ಜಿಲ್ಲೆಯಲ್ಲಿನ ಮ್ಯಾಸಬೇಡರ ಸಂಸ್ಕೃತಿಗಳ ಬಗ್ಗೆ ಕುರಿತು ತಿಳಿಸುತ್ತವೆ. ಭಿನ್ನವಾಗಿ ಅಧ್ಯಯನ ಮಾಡುವ ಪ್ರಯತ್ನದಲ್ಲಿ ಡಾ.ಕರಿಶೆಟ್ಟಿ ರುದ್ರಪ್ಪನವರು 'ಮ್ಯಾಸನಾಯಕರು : ಒಂದು ಜನಾಂಗಿಕ ಅದ್ಯಯನ'ದಲ್ಲಿ ಬಳ್ಳಾರಿ, ಚಿತ್ರದುರ್ಗ ಜಿಲ್ಲೆ ಕೆಲವು ಬೇಡರ ಸಮುದಾಯಗಳು ಹಾಗೂ ಊರುಬೇಡರ ಬಗ್ಗೆ ಸ್ವಲ್ಪ ಮಾಹಿತಿ ನೀಡಿದ್ದಾರೆ. ಎಂ.ಪಿ.ವೀಣಾ ಅವರು 'ಮನೆ, ಸಮಾಜ ಮತ್ತು ಸಂಸ್ಕೃತಿ' ಎಂಬ ಕೃತಿಯಲ್ಲಿ ಮ್ಯಾಸನಾಯಕರ ಹಾಗೂ ಊರನಾಯಕರ ಗೃಹವಾಸ್ತುಶಿಲ್ಪ ಕುರಿತು ಪುಸ್ತಕ ರಚಿಸಿದ್ದಾರೆ. ಅದೇ ರೀತಿ ಡಾ.ವಿರುಪಾಕ್ಷಿ ಪೂಜಾರಿಹಳ್ಳಿ ಅವರು ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ 'ಬೇಡ್ತ ಮತ್ತು ಬೇಡರ ಸಂದರ್ಭಗಳು ಒಂದು ಚಾರಿತ್ರಿಕ ಅಧ್ಯಯನ' ಎಂಬ ಪ್ರಬಂಧ ರಚಿಸಿದ್ದಾರೆ.

ಡಾ.ಕೆ.ಎಂ.ಮೈತ್ರಿ ಅವರು 'ಬುಡಕಟ್ಟು ಕುಲಕಸುಬುಗಳು' ಎಂಬ ಕೃತಿಯಲ್ಲಿ ಬೇಡರ ಕಸುಬುಗಳ ಬಗ್ಗೆ ತಿಳಿಸಿದ್ದಾರೆ. ಎ.ಎಸ್.ಪ್ರಭಾಕರ ಅವರು 'ಮ್ಯಾಸಬೇಡರ ಕಥನಗಳು' ಎಂಬ ಕೃತಿ ರಚಿಸಿದ್ದಾರೆ. ಇವರುಗಳಲ್ಲದೇ ಮತ್ತೆ ಎಂ.ಎಸ್.ಪುಟ್ಟಣ್ಣ ಅವರ ಚಿತ್ರದುರ್ಗ ಪಾಳೆಯಗಾರರು ಕಪಟರಾಳ ಕೃಷ್ಣರಾವ್ ಅವರ ಸುರಪುರ ಸಂಸ್ಥಾನದ ಇತಿಹಾಸ, ಲಕ್ಷ್ಮಣತೆಲಗಾವಿ ಹರತಿಸಿರಿ (ಸಂ), ಚಂದ್ರವಳ್ಳಿ (ಸಂ), ಫ್ಲೀಟರು ಸಂಗ್ರಹಿಸಿದ ಹಲಗಲಿ ಬೇಡರು ಲಾವಣಿಗಳು ಹಾಗೂ ಇದುವರೆಗೂ ಪ್ರಕಟಗೊಳ್ಳುತ್ತಿರುವ 'ವಾಲ್ಮೀಕಿವಾಣಿ' ಮಾಸ ಪತ್ರಿಕೆಗಳು ಬೇಡರನ್ನು ಕುರಿತು ಸಮಗ್ರವಾಗಿ ವಿವರಿಸುತ್ತವೆ. ಡಾ.ಮೀರಾಸಾಬಿಹಳ್ಳಿ ಶಿವಣ್ಣನವರ ಗೊಲ್ಲಕಡಗ ಹಾಗೂ ೨೦೦೨ ಪ್ರಜಾವಾಣಿ ದೀಪಾವಳಿ ವಿಶೇಷಾಂಕದಲ್ಲಿ ಪಶುಪಾಲಕ ಮ್ಯಾಸಬೇಡರು ಎಂಬ ಲೇಖನವನ್ನು ಪ್ರಕಟಿಸಿ ಮ್ಯಾಸಬೇಡರ ಬಗ್ಗೆ ಕೆಲವು ಮಾಹಿತಿಗಳನ್ನು ಒದಗಿಸಿಕೊಟ್ಟಿದ್ದಾರೆ.

**ಅಡಿಟಿಪ್ಪಣಿಗಳು**

೧. ಕುಂಬಾಸ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಪು. ೪೭

೨. ಅದೇ, ಪು. ೨೯

೩. Ballary District Gazetter, P. ೬೯೫

# ೨

# ಸಾಮಾಜಿಕ ಬದಲಾವಣೆ

ಸಮಾಜವು ಸದಾ ಕಾಲವೂ ಪರಿವರ್ತನಶೀಲವಾದುದು. ಅದು ಜಡತೆಯಿಂದ ಕೂಡಿಲ್ಲ. ಇತಿಹಾಸದುದ್ದಕ್ಕೂ ಮಾನವನ ಜೀವನವು ಪ್ರಚಂಡ ಬದಲಾವಣೆಗಳನ್ನು ಕಂಡಿದೆ. ಒಂದು ಕಾಲದಲ್ಲಿ ಮಾನವನು ಆಹಾರಕ್ಕಾಗಿ ಸ್ಥಳದಿಂದ ಸ್ಥಳಕ್ಕೆ ಅಲೆಯುತ್ತಿದ್ದವನು, ಪ್ರಾಣಿಗಳನ್ನು ಪಳಗಿಸಿ ಪಶುಸಂಗೋಪನೆ ಯಿಂದ ಜೀವನ ಸಾಗಿಸಿ ಮುಂದೆ ವ್ಯವಸಾಯಗಾರನಾಗಿ, ಇಂದು ಕೈಗಾರಿಕೋದ್ಯಮಿಯಾಗಿದ್ದಾನೆ. ಅಂದು ಮಾನವನು ಎತ್ತಿನಗಾಡಿಯಲ್ಲಿ ಗಂಟೆಗೆ ೬ ಕಿ.ಮೀ.ವೇಗದಲ್ಲಿ ಚಲಿಸುತ್ತಿದ್ದನು. ಆದರೆ ಇಂದು ಜಂಬೋಜೆಟ್ ವಿಮಾನದಲ್ಲಿ ಶರವೇಗದಲ್ಲಿ ಚಲಿಸುತ್ತಿದ್ದಾನೆ. ನಾವೆಲ್ಲರು ಸದಾ ಬದಲಾವಣೆಗೊಳಪಟ್ಟಿರುವ ಪ್ರಪಂಚದ ಒಂದು ಭಾಗ. ನಮ್ಮ ವೈಯಕ್ತಿಕ ಹಾಗೂ ಸಾಮಾಜಿಕ ಸ್ಥಿತಿಗಳಲ್ಲಿ ನಿರಂತರ ಬದಲಾವಣೆ ಸಂಭವಿಸುತ್ತಿರುತ್ತದೆ. ಬದಲಾವಣೆ ಪ್ರಕೃತಿಯ ನಿಯಮ. ಪರಿವರ್ತನೆ ಸರ್ವವ್ಯಾಪಕವಾದ ಒಂದು ಪ್ರಕ್ರಿಯೆ. ಇದು ಸಮಾಜದ ಆಂತರಿಕ ಲಕ್ಷಣಗಳಲ್ಲಿ ಒಂದಾಗಿದೆ.

ಬದಲಾವಣೆ ಪ್ರಕ್ರಿಯೆ ಸಮಾಜದ ವಿವಿಧ ವಿಷಯಗಳ ಮೇಲೆ ಪ್ರಭಾವ ಬೀರಿದೆ. ಇದಕ್ಕೆ ಸರಿಯೆನಿಸುವ ವ್ಯಾಖ್ಯೆ ಹೀಗಿದೆ. "Some of the many aspcets of change in our Social world are changes in instiutions. Changes in material culture, Culture diffusion and Changes in population"[೧] ಅಂದರೆ ಸಾಮಾಜಿಕ ಬದಲಾವಣೆ ಎಂಬ ಪ್ರಕ್ರಿಯೆ. ಸಮಾಜದಲ್ಲಿರುವ ಸಾಮಾಜಿಕ ಸಂಸ್ಥೆಗಳು, ವಸ್ತು ಸಂಸ್ಕೃತಿ, ಸಾಂಸ್ಕೃತಿಕ ವಿಕೇಂದ್ರೀಕರಣ ಹಾಗೂ ಜನಸಂಖ್ಯೆಯಲ್ಲಿ ಸಂಭವಿಸುತ್ತದೆ ಎಂಬ ಒಳಾರ್ಥವನ್ನು ಪಡೆದಿದೆ. ಇದರಂತೆ ಬದಲಾವಣೆ ಎಂಬುದು

ಸಮಾಜದ ಪ್ರತಿಯೊಂದು ಕಣದಲ್ಲಿಯೂ ಸಂಭವಿಸುತ್ತದೆ. ಅದರಲ್ಲಿ ಬುಡಕಟ್ಟು ಜೀವನಕ್ರಮವೂ ಒಂದಾಗಿದೆ.

ಆಧುನಿಕಯುಗದಲ್ಲಿ ಸಾಮಾಜಿಕ ಬದಲಾವಣೆ ತೀವ್ರಗತಿಯಲ್ಲಿ ನಡೆದಿದೆ. ಸಾಮಾಜಿಕ ಬದಲಾವಣೆಗಳನ್ನು ಸುವ್ಯವಸ್ಥಿತ ಹಾಗೂ ಅಪೇಕ್ಷಣೀಯ ರೀತಿಯಲ್ಲಿ ಸಾಧಿಸಲು ಪೂರ್ವ ನಿಯೋಜಿತ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸಲಾಗುತ್ತದೆ. ಔದ್ಯಮೀಕರಣ, ತಾಂತ್ರಿಕತೆಯ ತೀವ್ರ ಮುನ್ನಡೆ, ನಗರೀಕರಣ ಮೊದಲಾದ ಅನೇಕ ಅಂಶಗಳು ಸಾಮಾಜಿಕ ಬದಲಾವಣೆಗೆ ಹೆಚ್ಚಿನ ಚಾಲನೆ ನೀಡುತ್ತಿವೆ. ಬದಲಾವಣೆ ಎಂಬುದು ಶಾಶ್ವತವಾಗಿ ಇರುವಂತಹ ಒಂದು ಅಂಶವಾಗಿದೆ. ಇದಕ್ಕೆ ಸೂಕ್ತವಾಗಿರುವಂತೆ D.M.Raviprasad ಎಂಬವವರು "Change is a Permanent Characteristic to all objects"[೨] ಎಂದು ಹೇಳಿದ್ದಾರೆ. ಬದಲಾವಣೆಯಿಂದಾಗಿ ತಲೆದೋರಿರುವ ಪಾಶ್ಚಾತ್ಯೀಕರಣ ಹಾಗೂ ಸಂಸ್ಕೃತೀಕರಣಗಳು ಸಮಾಜದಲ್ಲಿ ತಲೆದೋರಿ ತೀವ್ರತರವಾದ ಪರಿವರ್ತನೆಗಳನ್ನು ತಂದಿವೆ. ಬುಡಕಟ್ಟು ಜನರ ಜೀವನವಿಧಾನ ಅವರ ಆಚಾರ, ವಿಚಾರ, ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಮಾಜಿಕಸಂಸ್ಥೆ ಇವೆಲ್ಲವುಗಳ ಮೇಲೆ ಬದಲಾವಣೆ ಸಂಭವಿಸಿದೆ. ಏಕೆಂದರೆ ಸಾಮಾಜಿಕ ಬದಲಾವಣೆ ಎಂಬ ಪ್ರಕ್ರಿಯೆಗೆ ಸಮಾಜದಲ್ಲಿರುವ ಯಾವ ವಸ್ತುವೂ ಹೊರತಾಗಿಲ್ಲ. ಈ ಬದಲಾವಣೆಗಳು 'ಹೇಗೆ' ಮತ್ತು 'ಏಕೆ' ಉಂಟಾಗುತ್ತವೆಯೆಂಬುದೇ ಸಾಮಾಜಿಕ ಬದಲಾವಣೆಯ ಅರ್ಥ ಹಾಗೂ ಅಂಶಗಳನ್ನು ವಿವರಿಸುತ್ತದೆ. ಸಾಮಾಜಿಕ ವಿಕಾಸ ಬದಲಾವಣೆಯಲ್ಲಿನ ಒಂದು ಅಂಶವಾಗಿದೆ. ಇದಕ್ಕೆ ಎ.ಆರ್.ಕಟ್ಟಿಯವರು "ಸಾಮಾಜಿಕ ವಿಕಾಸವು ಏಕತೆಯಿಂದ ಅನೇಕತೆಯೆಡೆಗೆ ಸಾಗುತ್ತದೆ. ಸರಳತೆಯಿಂದ ಸಂಕೀರ್ಣತೆಯಡೆಗೆ ಕೊಂಡೊಯ್ಯುತ್ತದೆ. ಪ್ರಾಚೀನಕಾಲದಲ್ಲಿ ತೀರಾ ಸರಳವಾದ ನಿರಾಡಂಬರ ಬುಡಕಟ್ಟಿನ ಸಮಾಜವು ಅಸ್ತಿತ್ವದಲ್ಲಿತ್ತು. ಕಾಲಾಂತರದಲ್ಲಿ ಬುಡಕಟ್ಟಿನ ಸಮಾಜವು ವಿಕಸಿತ ಹೊಂದಿ, ಇಂದು ಅತ್ಯಂತ ಸಂಕೀರ್ಣ ಸಮಾಜಿಕ ವ್ಯವಸ್ಥೆಯಿಂದ ಕೂಡಿದ ನಾಗರೀಕ ಸಮಾಜವಾಗಿದೆ"[೩] ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಮಾತು ಪ್ರಸ್ತುತ ದಿನಗಳಲ್ಲಿ ಯಥೋಚಿತವಾಗಿದೆ.

## ೨.೧ ಸಾಮಾಜಿಕ ಬದಲಾವಣೆಯ ಅರ್ಥ

ಸಮಾಜವು ಸಾಮಾಜಿಕ ಸಂಬಂಧಗಳ ಬಲೆಯಾಗಿದೆ. ಸಮಾಜವೆನ್ನುವುದು ನಿರಂತರವಾಗಿ ಮಾರ್ಪಾಡು ಹೊಂದುತ್ತಿರುವ ಒಂದು ಪ್ರಕ್ರಿಯೆ ಎನ್ನಬಹುದು. ಒಂದು ವೇಳೆ ಸಮಾಜ ಬದಲಾಗದಿದ್ದರೆ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿತ್ತು ಎಂದು ಹೇಳಿದರೆ ತಪ್ಪಾಗಲಾರದು. ಬದಲಾವಣೆ ನಿಸರ್ಗದ ನಿಯಮ. ಇದಕ್ಕೆ ಸಂಬಂಧಿಸಿದಂತೆ 'Changeology' ಎಂಬ ಪುಸ್ತಕವನ್ನೇ ಡಿ.ಎಂ.ರವಿಪ್ರಸಾದ್‌ರವರು ಬರೆದಿದದ್ದಾರೆ.

### ಅರ್ಥ

ಬದಲಾವಣೆ ಎಂಬ ಪದ ಇಂಗ್ಲಿಶ್ ಪದವಾದ 'Change' ಎಂಬುದರ ಕನ್ನಡ ರೂಪಾಂತರವಾಗಿದೆ. ಇಲ್ಲಿ 'Change' ಎಂದರೆ 'A thing or a matter with a difference" ಎಂಬ ಅರ್ಥ ಕೊಡುತ್ತದೆ.

ಬದಲಾವಣೆ / ಪರಿವರ್ತನೆ ಎಂಬುದನ್ನು ಸರಳವಾದ ಶಬ್ದಗಳಲ್ಲಿ ಚ.ನ.ಶಂಕರರಾವ್ ಅವರು ಈ ಕೆಳಗಿನಂತೆ ಉಲ್ಲೇಖಿಸಿದ್ದಾರೆ. ಅದು

"ಒಂದು ವಸ್ತು ಅಥವಾ ಪರಿಸ್ಥಿತಿ ಅಥವಾ ಜೀವಿಯಲ್ಲಿ ಸಾಮಯಿಕಾಗಿ ಕಂಡುಬರುವ ವ್ಯತ್ಯಾಸ ಪಲ್ಲಟ ಅಥವಾ ಮಾರ್ಪಾಟನ್ನು ಪರಿವರ್ತನೆ"[೪] ಎಂಬುದಾಗಿದೆ.

ಸಮಾಜದ ರಚನೆ ಮತ್ತು ಕಾರ್ಯಗಳಲ್ಲಿ ಕಂಡುಬರುವ ಬದಲಾವಣೆಯೇ ಸಾಮಾಜಿಕ ಬದಲಾವಣೆ ಎಂದು ಹೇಳಬಹುದು.

ಸಾಮಾಜಿಕ ಬದಲಾವಣೆಯನ್ನು ಕುರಿತು ಸಾಕಷ್ಟು ಸಮಾಜಶಾಸ್ತ್ರಜ್ಞರು ತಮ್ಮದೇ ಆದ ವ್ಯಾಖ್ಯೆ ನೀಡಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

"Social change refers to basic alterations overtime in the behavior patterns culture and Structure of Socicty"[೫] ಎಂಬುದಾಗಿ ವ್ಯಾಖ್ಯಾನಿಸಲಾಗಿದೆ. ಅಂದರೆ ಸಾಮಾಜಿಕ ಬದಲಾವಣೆ ಎಂಬುದು ಕೆಲವು ಕಾಲಮಾನಗಳಲ್ಲಿ ವರ್ತನೆ, ಸಂಸ್ಕೃತಿ ಹಾಗೂ ಸಾಮಾಜಿಕ ರಚನೆಯಲ್ಲಿ ಉಂಟಾಗುವ ವ್ಯತ್ಯಯಗಳು ಎಂಬುವ ಒಳಾರ್ಥ ಹೊಂದಿದೆ. ಅದೇ ವೇಳೆ ಇವರು ಇನ್ನೊಂದು ಮಾತನ್ನು ಹೇಳಿದ್ದಾರೆ. ಅದೇನೆಂದರೆ 'ಎಲ್ಲ ಬದಲಾವಣೆಗಳನ್ನು ಸಾಮಾಜಿಕ ಬದಲಾವಣೆಗಳಲ್ಲ' ಎಂಬುದಾಗಿದೆ.

"ಸಮಾಜದಲ್ಲಿ ಉಂಟಾಗುವ ಹಳೆಯದನ್ನು ತೆಗೆದು ಹೊಸದನ್ನು ಅಳವಡಿಸುವ ಅಥವಾ ಮಾರ್ಪಡಿಸುವ ಹೊಸ ಶೋಭಾಚಾರ ಅಥವಾ ವಿಧಾನಕ್ಕೆ ಸಾಮಾಜಿಕ ಬದಲಾವಣೆ" ಎಂದು ಎಚ್.ಟಿ. ಮಜುಂದಾರ್ ಹೇಳಿದ್ದಾರೆ."[೬] ಅಂದರೆ ಸಮಾಜದಲ್ಲಿರುವ ಹಳೆಯ ನಂಬಿಕೆ, ಸಂಪ್ರದಾಯ ಇತ್ಯಾದಿಗಳನ್ನು ತೆಗೆದುಹಾಕಿ ಹೊಸತನ್ನು ತರುವ ವಿಧಾನವೇ ಸಾಮಾಜಿಕ ಬದಲಾವಣೆ ಎಂಬ ಅರ್ಥ ಕೊಡುತ್ತದೆ.

"ಜನ ಜೀವನದಲ್ಲಿ ಅಥವಾ ಸಮಾಜದ ವ್ಯವಸ್ಥೆಯಲ್ಲಿ ಹಳೆಯ ರೀತಿ - ನೀತಿಗಳನ್ನು ಬದಲಿಸುವ ಅಥವಾ ಮಾರ್ಪಡಿಸುವ ಹೊಸ ಫ್ಯಾಶನ್ನು ಅಥವಾ ರೀತಿ - ನೀತಿಗಳನ್ನು ಸಾಮಾಜಿಕ ಬದಲಾವಣೆ' ಎಂದು ಮಂಜುದಾರ್ ವ್ಯಾಖ್ಯಾನಿಸಿದ್ದಾರೆ."[೭]

ಅಂದರೆ ಸಮಾಜದಲ್ಲಿ ಈ ಹಿಂದೆ ಇದ್ದ ರೀತಿ, ನೀತಿ, ರಿವಾಜು, ಸಂಪ್ರದಾಯಗಳಲ್ಲಿ ಮಾರ್ಪಾಟುಗಳಾಗಿರುವುದೇ ಸಾಮಾಜಿಕ ಬದಲಾವಣೆ ಎಂಬುದಾಗಿ ಇವರ ಅಭಿಪ್ರಾಯವಾಗಿದೆ.

"Social Change the alteration of patterns Social organization structure institution and intergroup or in intragroup behaviors overtime"[೮] ಎಂದು 'Siciology' ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ.

ಇದು ಸಾಮಾಜಿಕ ಸಂಘಟನೆ, ರಚನೆ, ಸಂಸ್ಥೆ, ಒಳಸಮೂಹ ಅಥವಾ ಹೊರಸಮೂಹದಲ್ಲಿ ಆಗುವ ಬದಲಾವಣೆಗಳೇ ಸಾಮಾಜಿಕ ಬದಲಾವಣೆ ಎಂಬ ಅರ್ಥ ಕೊಡುತ್ತದೆ.

"ಜನತೆಯ ಜೀವನದ ವಿವಿಧ ಮಾದರಿಗಳಲ್ಲಿ ತಲೆದೋರುವ ಮಾರ್ಪಾಡುಗಳು ಸಾಮಾಜಿಕ ಬದಲಾವಣೆಯು"[೯] ಎಂಬುದಾಗಿ ಕೊನಿಗ್‌ರವರು ಅಭಿಪ್ರಾಯಪಟ್ಟಿದ್ದಾರೆ.

"Tenson and Conflict within a Society also Produce Social Change"[೧೦] ಎಂಬುದಾಗಿ John J. Macionis ರವರು ವಿವರಿಸಿದ್ದಾರೆ. ಅಂದರೆ ಇವರ ಪ್ರಕಾರ ಸಮಾಜದೊಳಗಿನ ಆಂತರಿಕ ಹಾಗೂ ಸಂಘರ್ಷಗಳು ಸಹ ಸಾಮಾಜಿಕ ಬದಲಾವಣೆಯನ್ನು ಉಂಟುಮಾಡುತ್ತವೆ ಎಂಬ ಅರ್ಥವನ್ನು ನೀಡಿದ್ದಾರೆ.

ಈ ಮೇಲಿರುವ ಎಲ್ಲ ರೀತಿಯ ವ್ಯಾಖ್ಯೆನೆಗಳನ್ನು ನೋಡಿದಾಗ ನಮಗೆ ಒಂದು ಅಂಶ ಗಮನಕ್ಕೆ ಬರುತ್ತದೆ. ಅದು

ಜೀವನದ ವಿವಿಧ ರಂಗಗಳಲ್ಲಿ ಅಂದರೆ ಕೇವಲ ಕಲೆ, ಭಾಷೆ, ತಾಂತ್ರಿಕತೆ, ತಂತ್ರಜ್ಞಾನ ಮೊದಲಾದವು ಗಳಲ್ಲಿ ಸಂಭವಿಸುವ ಬದಲಾವಣೆ ಸಾಮಾಜಿಕ ಬದಲಾವಣೆ ಎನಿಸುವುದಿಲ್ಲ ಅವುಗಳ ಪ್ರಭಾವದಿಂದ ಜನ ಜೀವನದ ರೀತಿ ನೀತಿ ಬದಲಾಗುತ್ತದೆ. ಸಮಾಜದ ನಮೂನೆಗಳಲ್ಲಿ ಹಾಗೂ ರಚನೆಗಳಲ್ಲಿ ಉಂಟಾದ ಬದಲಾವಣೆಗಳನ್ನು ಸಾಮಾಜಿಕ ಬದಲಾವಣೆ ಎನ್ನಬಹುದು. ಅವಿಭಕ್ತ ಕುಟುಂಬ ಆಧುನಿಕ ಕುಟುಂಬಕ್ಕೆ ಪರಿವರ್ತನೆಗೊಳ್ಳುವುದು. ವಿವಾಹ ಆಚರಣೆಗಳಲ್ಲಿ ಸಂಪ್ರದಾಯಗಳ ವಿಧಾನದಲ್ಲಿ ಆದ ಬದಲಾವಣೆ ಇವೆಲ್ಲವೂ ಸಾಮಾಜಿಕ ಬದಲಾವಣೆಗೆ ನಿದರ್ಶನವಾಗಿವೆ.

ಒಮ್ಮೆ ಒಂದು ಕ್ಷೇತ್ರದಲ್ಲಿ ಉಂಟಾದ ಬದಲಾವಣೆಯು ಇತರೆ ಕ್ಷೇತ್ರಗಳಿಗೂ ವ್ಯಾಪಿಸಿ ಕೊನೆಗೆ ಇಡೀ ಸಮಾಜಕ್ಕೂ ವ್ಯಾಪಿಸಿಕೊಳ್ಳುತ್ತದೆ ಎಂಬುದನ್ನು ಗಮನದಲ್ಲಿರಿಸಿಕೊಳ್ಳಬೇಕಾಗಿದೆ.

**೨.೨ ಸಾಮಾಜಿಕ ಬದಲಾವಣೆಗೆ ಕಾರಣಗಳು**

ನಿಸರ್ಗದಲ್ಲಿ ಜರುಗುವ ಪ್ರತಿಯೊಂದು ಕ್ರಿಯೆಗೂ ಕಾರಣವೆಂಬುದು ಇದ್ದೇ ಇರುತ್ತದೆ. ಅದರಂತೆ ಮಾನವನ ವೈಯಕ್ತಿಕ ಜೀವನದಲ್ಲಿ ಆಗುವ ಕೆಲವು ಪ್ರಕ್ರಿಯೆಗಳಿಗೂ ಕೆಲವು ಕಾರಣಗಳಿರುತ್ತವೆ. ಅಂದ ಮೇಲೆ ಸಾಮಾಜಿಕ ಬದಲಾವಣೆಗೆ ಕೆಲವು ಕಾರಣಗಳು ಇವೆ ಎಂದೆನಿಸುತ್ತದೆ. ಅವುಗಳನ್ನು ನಾವು ನೋಡಿದಂತೆ ಒಂದರ ಹಿಂದೆ ಮತ್ತೊಂದರಂತೆ ಕೊಂಡಿಯಾಕಾರದಲ್ಲಿವೆ. ಇದಕ್ಕೆ ಸರಿಹೊಂದುವಂತೆ Principles of Siciology ಎಂಬ ಪುಸ್ತಕದಲ್ಲಿ ಶರ್ಮಾರವರು "The Causal factors of Social Change are the following :

culture, Technological, Biological, Population, Environmental"[೧೧] ಎಂದು ಉಲ್ಲೇಖಿಸಿದ್ದಾರೆ. ಸಾಮಾಜಿಕ ಬದಲಾವಣೆಗೆ ಮೇಲಿನ ಅಂಶಗಳು ಯಾವ ರೀತಿ ಕಾರಣವಾಗುತ್ತವೆ ಎಂಬುದನ್ನು ಸೂಕ್ಷ್ಮವಾಗಿ ಸಂಕ್ಷಿಪ್ತವಾಗಿ ಅವಲೋಕಿಸೋಣ

**ಸಾಂಸ್ಕೃತಿಕ ಅಂಶಗಳು (Cultural factors)**

ಸಾಂಸ್ಕೃತಿಕ ಅಂಶಗಳು ಸಾಮಾಜಿಕ ಬದಲಾವಣೆಯ ಅತೀ ಮುಖ್ಯ ಕಾರಣವಾದ ಅಂಶಗಳಾಗಿವೆ. ಇದನ್ನು ಮ್ಯಾಕ್ಸವೆಬರ್‌ರವರು ನಿರೂಪಿಸಿದ್ದಾರೆ. ಸಾಂಸ್ಕೃತಿಕ ಅಂಶಗಳಲ್ಲಿ ಮತ್ತೆ ನಾವು ಭೌತ ಸಂಸ್ಕೃತಿ

ಮತ್ತು ಅಭೌತ ಸಂಸ್ಕೃತಿ ಎಂಬ ಎರಡು ವಿಧಗಳನ್ನು ಕಾಣಬಹುದು. ಇವುಗಳಲ್ಲಿ ಆಗುವ ವ್ಯತ್ಯಾಸಗಳು ಸಾಂಸ್ಕೃತಿಕ ಬದಲಾವಣೆಗೆ ಕಾರಣವಾಗಿವೆ. ಸಂಸ್ಕೃತಿಯಲ್ಲಿ ಒಂದು ಸಮುದಾಯದ ಆಚಾರ, ವಿಚಾರ, ಸಂಪ್ರದಾಯ ಇತ್ಯಾದಿ ಅಂಶಗಳನ್ನು ಕಾಣುತ್ತೇವೆ. ಇವೆಲ್ಲವೂ ಸಹ ಸಾಂಸ್ಕೃತಿಕ ಬದಲಾವಣೆಗೆ ಕಾರಣವಾಗಿವೆ. ಸಂಸ್ಕೃತಿಯಲ್ಲಿ ಆದ ಬದಲಾವಣೆಯಿಂದಾಗಿ ಸಮಾಜದಲ್ಲಿ ಬದಲಾವಣೆ ಆಗಿರುವುದನ್ನು ಗುರುತಿಸಬಹುದು. ಸಂಸ್ಕೃತಿಯಲ್ಲಿ ಆಗುವ ವ್ಯತ್ಯಯಗಳನ್ನು ಸಾಮಾಜಿಕ ಸಂಬಂಧಗಳಲ್ಲಿ ಯಾರೊಬ್ಬರೂ ಸಹ ತಿರಸ್ಕರಿಸಲಾರರು. ಇದರಿಂದಾಗಿ ಸಾಮಾಜಿಕ ಬದಲಾವಣೆ ಗತಿ ಹೆಚ್ಚಾಗುತ್ತದೆ. ಸಾಂಸ್ಕೃತಿಕ ಅಂಶಗಳು ಸಾಮಾಜಿಕ ಬದಲಾವಣೆಗೆ ಕಾರಣವಾಗಿದೆ.

**ತಾಂತ್ರಿಕ ಅಂಶಗಳು (Technolagical factors)**

ತಾಂತ್ರಿಕ ಅಂಶಗಳು ಸಾಮಾಜಿಕ ಬದಲಾವಣೆಯ ಅತೀ ಮಹತ್ವದ ಕಾರಣವಾದ ಅಂಶವಾಗಿದೆ. ಆಗ್ ಬರ್ನ್‌ರವರು ಹೇಳಿರುವಂತೆ "Technology Changes Society by Changing our environments to which we in turn adopt. This Change is usually in the material environment and the adjustment we make to the changes often modifies customs and social institution"[೧೨] ತಾಂತ್ರಿಕತೆಯಲ್ಲಿ ಆಗುವ ಬದಲಾವಣೆಗಳು ಸಾಮಾನ್ಯವಾಗಿ ಸಮಾಜದಲ್ಲಿರುವ ಕುಟುಂಬ, ವಿವಾಹ, ಶಿಕ್ಷಣ ಮೊದಲಾದ ಅಂಶಗಳ ಮೇಲೆ ಪ್ರಭಾವ ಬೀರಿ ಇದರೊಂದೊಗೆ ಈ ಸಂಸ್ಥೆಗಳು ಹಾಗೂ ಸಮಾಜದ ಇತರೆ ಅಂಶಗಳೂ ಕೂಡ ಬದಲಾವಣೆಗೆ ಒಳಪಡುತ್ತವೆ. ಈ ಹಿಂದೆ ಇದ್ದ ಅತ್ಯಂತ ಸರಳ ಜೀವನ ಇಂದು ಸಂಕೀರ್ಣಗೊಂಡಿದೆ ಎಂದರೆ ಇದಕ್ಕೆ ಮೂಲಕಾರಣ ತಾಂತ್ರಿಕ ಅಂಶಗಳಲ್ಲಿ ಉಂಟಾಗಿರುವ ಬದಲಾವಣೆ ಎಂದು ಹೇಳಬಹುದು.

**ಜೈವಿಕ ಅಂಶಗಳು (Biological factors)**

ಜೈವಿಕ ಅಂಶಗಳು ಸಾಮಾಜಿಕ ಬದಲಾವಣೆಗೆ ಪರೋಕ್ಷವಾಗಿ ಕಾರಣವಾಗಿವೆ. ಜೈವಿಕ ಅಂಶಗಳಿಂದಾಗಿ ಪರಿಸರದಲ್ಲಿನ ಜನಸಂಖ್ಯೆ, ಜನನ ಹಾಗೂ ಮರಣದ ದರ, ಅನುವಂಶೀಯತೆ ಮೊದಲಾದ ಅಂಶಗಳಲ್ಲಿ ಪರಿವರ್ತನೆ ಅಥವಾ ಬದಲಾವಣೆ ಎಂಬುದು ಕಂಡುಬರುತ್ತದೆ. ಇಂತಹ ಕಾರಣಗಳಿಂದಾಗಿ ಸಮಾಜದಲ್ಲಿ ಸಂಘರ್ಷ, ಹೋರಾಟ, ಸ್ಪರ್ಧೆ ಮೊದಲಾದ ಬದಲಾವಣೆಗಳು ಸಂಭವಿಸುತ್ತವೆ. ಜೈವಿಕ ಅಂಶಗಳು ಯಾರ ಹಿಡಿತದಲ್ಲಿ ಇಲ್ಲದೆ ತನಗೆ ಬೇಕೆನಿಸಿದಾಗ ಸಮಾಜದಲ್ಲಿ ಬದಲಾವಣೆಗಳನ್ನು ತರುತ್ತದೆ. ಜೈವಿಕ ಕಾರಣಗಳಿಂದಾಗಿ ಮಾನವನಲ್ಲಿರುವ ವರ್ತನೆ ಅವನ ಮನೋಧರ್ಮ, ನಡತೆ, ಮೊದಲಾದ ವಿಷಯಗಳಲ್ಲಿ ಕಾಲಾನುಗುಣವಾಗಿ ಬದಲಾದಂತೆಲ್ಲ ಸಮಾಜದಲ್ಲಿ ಬದಲಾವಣೆ ಸಂಭವಿಸುತ್ತಿರುತ್ತದೆ. ಆದರೆ ಇದು ಪರೋಕ್ಷವಾಗಿ ಕಾರಣವಾದ ಅಂಶವಾಗಿದೆ.

**ಜನಸಂಖ್ಯಾ ಅಂಶಗಳು (Population factors)**

ಜನಸಂಖ್ಯಾ ಸ್ಫೋಟ ಎಂಬುದು ಸಮಾಜದಲ್ಲಿನ ವಿವಿಧ ರೀತಿಯ ಬದಲಾವಣೆಗಳಿಗೆ ಮೂಲ ಕಾರಣವಾಗಿದೆ ಎಂದು ಹೇಳಬಹುದು. ಜನಸಂಖ್ಯಾ ಗಾತ್ರದಲ್ಲಿ ಆಗುವ ವ್ಯತ್ಯಾಸಗಳು ಸಾಮಾಜಿಕ

ಬದಲಾವಣೆಯ ಮೇಲೆ ಪರಿಣಾಮವನ್ನು ಬೀರುತ್ತವೆ. ಸಮಾಜದಲ್ಲಿರುವ ಸಂಘಟನೆ, ಸಂಪ್ರದಾಯ, ಸಂಸ್ಥೆ, ಸಹಕಾರ ಮೊದಲಾದವುಗಳ ಮೇಲೆ ಪ್ರಭಾವ ಬೀರಿ ಬದಲಾವಣೆಗೆ ಕಾರಣವಾಗಿದೆ. ಜನಸಂಖ್ಯಾ ಗಾತ್ರದಲ್ಲಿ ಆಗುವ ಬದಲಾವಣೆಗಳಿಂದಾಗಿ ಪುರುಷ ಹಾಗೂ ಮಹಿಳೆಯರ ಪರಿಮಾಣ ಯುವಕ, ಯುವತಿ, ವೃದ್ಧರು, ಬಂಧುತ್ವ ಇತ್ಯಾದಿ ವಿಷಯಗಳಲ್ಲಿ ಬದಲಾವಣೆ ಕಂಡುಬರುತ್ತವೆ. ಇದರಿಂದಾಗಿ ಆರ್ಥಿಕ, ರಾಜಕೀಯಗಳಂತಹ ಅಂಶಗಳಲ್ಲಿ ಕೂಡ ವ್ಯತ್ಯಯಗಳಾಗುತ್ತವೆ. ಇದಲ್ಲದೆ ಸಮಾಜದಲ್ಲಿ ವಿವಿಧ ರೀತಿಯ ಸಮಸ್ಯೆ ತಲೆದೋರುತ್ತವೆ. ಜನಸಂಖ್ಯೆ ಗಾತ್ರದಲ್ಲಿನ ಪರಿವರ್ತನೆಯಿಂದ ಸಮಾಜದಲ್ಲಿ ಸಮಸ್ಯೆಗಳ ಸರಮಾಲೆಯೇ ಇದೆ.

**ಪರಿಸರದ ಅಂಶಗಳು (Environment factors)**

ಹಲವಾರು ಭೂಗೋಳಶಾಸ್ತ್ರಜ್ಞರು ಪರಿಸರದ ಕೆಲವು ಅಂಶಗಳು ಸಾಮಾಜಿಕ ಬದಲಾವಣೆಗೆ ಕಾರಣವಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪರಿಸರದಲ್ಲಿನ ಹಲವು ವ್ಯತ್ಯಾಸಗಳಿಂದಾಗಿ ಜನರ ಜೀವನ, ಜನಸಂಖ್ಯೆ, ಸಂಸ್ಥೆ ಮೊದಲಾದವುಗಳು ಬದಲಾವಣೆಗೊಳ್ಳುತ್ತವೆ. ಪರಿಸರದಲ್ಲಾದ ವ್ಯತ್ಯಾಸಗಳಿಂದಾಗಿ ವಿಕಾಸ, ನಾಗರೀಕತೆಯಂತಹ ಅಂಶಗಳು ಬದಲಾಗುತ್ತಿರುತ್ತವೆ. ಪರಿಸರದಲ್ಲಿ ಬಂದೊದಗುವ ಅತಿವೃಷ್ಠಿ, ಅನಾವೃಷ್ಠಿ, ಭೂಕಂಪ, ಋತುಗಳ ಬದಲಾವಣೆ ಇತ್ಯಾದಿಗಳಿಂದಾಗಿ ಜನರ ಜೀವನ ಹಾಗೂ ಸಮಾಜದಲ್ಲಿನ ವಿವಿಧ ರೀತಿಯ ಕೆಲಸ, ಕಾರ್ಯಗಳು, ಸಾಮಾಜಿಕ ಸಂಸ್ಥೆಗಳು ಇವುಗಳ ಜೊತೆಗೆ ಬದಲಾವಣೆಗೊಳ್ಳುತ್ತಿರುತ್ತವೆ.

ಈ ಮೇಲಿನ ಅಂಶಗಳು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಾಮಾಜಿಕ ಬದಲಾವಣೆಯ ಕಾರಣಗಳಾಗಿವೆ. ಸಾಮಾಜಿಕ ಬದಲಾವಣೆಯಿಂದಾಗಿ ಸಮಾಜವು ಒಂದು ಕಡೆ ವಿಕಾಸಗೊಂಡಂತೆ ಮತ್ತೊಂದುಕಡೆ ಬದಲಾವಣೆಯೊಂದಿಗೆ ಸಂಘರ್ಷ, ಸಮಸ್ಯೆಗಳು ಸಮಾಜದಲ್ಲಿ ತಲೆದೋರುತ್ತವೆ.

## ೨.೩ ಸಾಮಾಜಿಕ ಬದಲಾವಣೆಯ ಲಕ್ಷಣಗಳು

ಸಮಾಜದಲ್ಲಿರುವ ಪ್ರತಿಯೊಂದು ವಸ್ತುವು ತನ್ನದೇ ಆದ ವಿಶಿಷ್ಟ ಗುಣಲಕ್ಷಣಗಳನ್ನು ಹೊಂದಿದೆ. ಅದರಂತೆ ಸಾಮಾಜಿಕ ಬದಲಾವಣೆಯೂ ಸಹ ಕೆಲವು ವಿಶಿಷ್ಟವಾದ ಗುಣಲಕ್ಷಣಗಳನ್ನು ಹೊಂದಿದೆ. ಇದು ಎಂತಹ ವಿಶಿಷ್ಟ ಗುಣ ಲಕ್ಷಣಗಳನ್ನು ಹೊಂದಿದೆ ಎಂಬುದನ್ನು ಈ ಕೆಳಗಿನಂತೆ ನೋಡಬಹುದು.

**ಸಾಮಾಜಿಕ ಬದಲಾವಣೆಯು ಸಾರ್ವತ್ರಿಕವಾದದು (Social Change is a universal phenomenon)**

ಸಾಮಾಜಿಕ ಬದಲಾವಣೆ ಸಾರ್ವತ್ರಿಕತೆ ಗುಣವನ್ನು ಹೊಂದಿದೆ. ಅಂದರೆ ಈ ಪ್ರಕ್ರಿಯೆ ಎಲ್ಲ ಸಮಾಜಗಳಲ್ಲಿಯೂ ಕಂಡುಬರುತ್ತದೆ. ಸಾಮಾಜಿಕ ಬದಲಾವಣೆಯು ಕೇವಲ ಭಾರತದಲ್ಲಿ ಮಾತ್ರವಲ್ಲದೆ ಪ್ರಪಂಚದ ಪ್ರತಿಯೊಂದು ಸಮಾಜದಲ್ಲಿಯೂ ಸಂಭವಿಸುತ್ತಿರುತ್ತದೆ. ಇದಕ್ಕೆ ಬುಡಕಟ್ಟು ಸಮಾಜವು ಹೊರತಾಗಿಲ್ಲ. ಪ್ರಾಚೀನ ಕಾಲದಿಂದ ಆಧುನಿಕ ಸಮಾಜದವರೆಗೂ ಬದಲಾವಣೆ ನಡೆದೇ ಇದೆ. ಆದರೆ ಇದರ ಗತಿಯಲ್ಲಿ ಈಗ ಸ್ವಲ್ಪ ತೀವ್ರತೆ ಇರಬಹುದು. "ಬದಲಾವಣೆ ನಿಸರ್ಗ ಸಹಜವಾದ ನಿಯಮವಾಗಿದೆ. ಪ್ರತಿಯೊಂದು ಸಮಾಜವೂ ಸದಾಕಾಲವೂ ಬದಲಾಗುತ್ತಲೇ ಇರುತ್ತದೆ."[1] ಎಂಬ ಮಾತು ನಿಜವಾದುದಾಗಿದೆ.

**ಸಾಮಾಜಿಕ ಬದಲಾವಣೆ ಸಾಮುದಾಯಿಕವಾದುದು (Social Change is Community Change)**

ಸಾಮಾಜಿಕ ಬದಲಾವಣೆಯು ವೈಯಕ್ತಿಕವಾಗಿರದೆ ಸಾಮಾಜಿಕ ಸ್ವರೂಪದ್ದಾಗಿದೆ. ಇದು ಕೇವಲ ಒಬ್ಬ ವ್ಯಕ್ತಿಯ ಹಾಗೂ ಅವನ ಬದುಕಿನ ರೀತಿ-ನೀತಿಗಳಲ್ಲಾಗುವ ಪ್ರಕ್ರಿಯೆಯಾಗಿರದೇ ಸಮಸ್ತ ಸಾಮುದಾಯಿಕ ಜೀವನದಲ್ಲಿನ ವಿವಿಧ ಕ್ಷೇತ್ರ ಹಾಗೂ ಅವುಗಳ ಕಾರ್ಯ ನಿರ್ವಹಣೆಯಲ್ಲಿ ಮಾರ್ಪಾಟುಗಳನ್ನುಂಟು ಮಾಡುವ ಗುಣವನ್ನು ಹೊಂದಿದೆ. ಇಲ್ಲಿ ಕೇವಲ ಒಬ್ಬ ವ್ಯಕ್ತಿ ತನ್ನ ಜೀವನದಲ್ಲಿ ಪರಿವರ್ತನೆ ಕಂಡುಕೊಂಡರೆ ಅದು ಸಾಮಾಜಿಕ ಬದಲಾವಣೆ ಅಲ್ಲ. ಬದಲಾಗಿ ಇಡೀ ಸಮುದಾಯದಲ್ಲಿ ಆಗುವ ಪರಿವರ್ತನೆಗಳಿಗೆ ಸಾಮಾಜಿಕ ಬದಲಾವಣೆ ಎಂದು ಹೇಳಬಹುದು. ಇದು ಒಂದು ವಿಶಿಷ್ಟ ಗುಣವಾಗಿದೆ.

**ಸಾಮಾಜಿಕ ಬದಲಾವಣೆಯು ಗತಿಯಲ್ಲಿ ಏಕರೂಪತೆ ಹೊಂದಿಲ್ಲ (Speed of Social change is not uniformed)**

ಸಾಮಾಜಿಕ ಬದಲಾವಣೆ ಸಾರ್ವತ್ರಿಕವಾಗಿದೆ ಆದರೆ ಅದರ ಪ್ರಮಾಣ ಹಾಗೂ ಗತಿ ವಿಭಿನ್ನ ಪ್ರಮಾಣದಲ್ಲಿರುತ್ತದೆ. ಒಂದು ಪ್ರದೇಶದಲ್ಲಿ ಅಥವಾ ಸಮಾಜದಲ್ಲಿ ಇದರ ಗತಿ ವೇಗವಾಗಿದ್ದರೆ ಇನ್ನೊಂದು ಕಡೆ ಇದರ ಗತಿ ಕಡಿಮೆ ವೇಗದಲ್ಲಿರುತ್ತದೆ. ಪಾಶ್ಚಾತ್ಯ ರಾಷ್ಟ್ರಗಳ ಸಮಾಜದಲ್ಲಿ ಬದಲಾವಣೆ ಗತಿ ಅತ್ಯಂತ ವೇಗವಾಗಿದೆ. ಆದರೆ ಭಾರತದಂತಹ ದೇಶಗಳಲ್ಲಿ ಇದರ ವೇಗ ಸ್ವಲ್ಪ ಕಡಿಮೆ ಇದೆ.

ಉದಾ : ನಗರ ಪ್ರದೇಶದಲ್ಲಿನ ಬದಲಾವಣೆ ಗತಿ ಗ್ರಾಮೀಣ ಪ್ರದೇಶದ ಬದಲಾವಣೆ ಗತಿಯಿಂದ ಅಧಿಕ ಪ್ರಮಾಣದಲ್ಲಿರುತ್ತದೆ. ಅದರಂತೆ ಪ್ರಾಚೀನ ಕಾಲದಲ್ಲಿ ಇದರ ವೇಗ ಕಡಿಮೆ ಇದ್ದು ಆಧುನಿಕ ಕಾಲದಲ್ಲಿ ಇದರ ವೇಗ ಹೆಚ್ಚಾಗಿದೆ.

**ಸಾಮಾಜಿಕ ಬದಲಾವಣೆಯು ನಿಸರ್ಗಮಯವಾಗಿದೆ (Social Change is a law Nature)**

ಮಾನವನು ಸಮಾಜದ ಅತೀ ಮುಖ್ಯ ಅಂಶವಾಗಿದ್ದಾನೆ. ಸದಾ ಹೊಸತನ್ನು ಬಯಸುವ ಪ್ರವೃತ್ತಿ ಹೊಂದಿದ್ದಾನೆ, ಇದು ಅವನ ಸಹಜ ಗುಣ. ಆದಕಾರಣ ಸಾಮಾಜಿಕ ಬದಲಾವಣೆ ಸಹಜವಾದ ಪ್ರಕ್ರಿಯೆಯಾಗಿದೆ. ಕಾಲಮಾನಕ್ಕೆ ತಕ್ಕಂತೆ ಮಾನವನ ಬಯಕೆಗಳು ಬೇಡಿಕೆಗಳು ಬದಲಾಗುತ್ತ ಹೋಗುತ್ತವೆ. ಈ ಬದಲಾವಣೆಗಳಿಗೆ ಹೊಂದಿಕೊಳ್ಳಬೇಕಾದರೆ ಸಮಾಜದಲ್ಲಿಯ ವರ್ತನೆ, ರೀತಿ, ನೀತಿ, ಸಮಾಜದ ಸಂರಚನೆ ಬದಲಾಗಲೇಬೇಕಾಗುತ್ತದೆ. ಹೀಗಾಗಿ ಸಾಮಾಜಿಕ ಬದಲಾವಣೆ ಸಂಭವಿಸುತ್ತದೆ.

**ಸಾಮಾಜಿಕ ಬದಲಾವಣೆಯು ಸರಪಣಿ ಪ್ರಕ್ರಿಯೆಯಾಗಿದೆ (Social Change is Chain process)**

ಸಾಮಾಜಿಕ ಬದಲಾವಣೆ ಪ್ರಕ್ರಿಯೆ ನಿರಂತರವಾಗಿರುವಂತದ್ದು. ಸಮಾಜದ ಯಾವುದಾದರೂ ಒಂದು ಅಂಶದಲ್ಲಿ ಬದಲಾವಣೆ ಆದರೆ ಅದಕ್ಕೆ ಸಂಬಂಧಿಸಿದ ಮತ್ತೊಂದು ಅಂಶದಲ್ಲಿ ಬದಲಾವಣೆ ಅಥವಾ ಪರಿವರ್ತನೆ ಆಗುತ್ತದೆ ಹೀಗೆ ಇದು ಸಮಸ್ತ ಜೀವನದ ಮೇಲೆ ವ್ಯಾಪಿಸಿಕೊಳ್ಳುತ್ತದೆ. ಅಂದರೆ ಸಾಮಾಜಿಕ ಬದಲಾವಣೆ ಸರಪಳಿಯಂತೆ ಸಂಭವಿಸುತ್ತದೆ. ಇದು ಇದರ ವಿಶಿಷ್ಟ ಲಕ್ಷಣವಾಗಿದೆ.

ಉದಾ : ಕೈಗಾರಿಕೀಕರಣದ ಫಲವಾಗಿ ಗೃಹಕೈಗಾರಿಕೆಗಳು ನಶಿಸಿದವು. ಇದರೊಂದಿಗೆ ಮನೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದ ಕಾರ್ಮಿಕರು ಕಾರ್ಖಾನೆಗಳಿಗೆ ಬರಬೇಕಾಯಿತು. ಇದರಿಂದ ನಗರಗಳು ಬೆಳೆದು ಕುಟುಂಬ, ಮದುವೆ ಮೊದಲಾದ ವಿಷಯಗಳ ಮೇಲೆ ತನ್ನ ಪರಿಣಾಮವನ್ನು ಬೀರುತ್ತದೆ. ಹೀಗೆ ಒಂದರಿಂದ ಮತ್ತೊಂದು ಸರಪಳಿಗಳಂತೆ ಹಲವಾರು ವಿಷಯಗಳಲ್ಲಿ ಬದಲಾವಣೆ ಸಂಭವಿಸುತ್ತಲೇ ಇರುತ್ತವೆ.

**ಸಾಮಾಜಿಕ ಬದಲಾವಣೆಯ ಪರಿಣಾಮದ ಬಗೆಗೆ ಭವಿಷ್ಯ ನುಡಿಯುವುದು ಅಸಾಧ್ಯ**

ಪುರಾತನ ಕಾಲದಿಂದಲೂ ಸಮಾಜದಲ್ಲಿ ಹತ್ತು ಹಲವಾರು ವಿಷಯಗಳಲ್ಲಿ ಬದಲಾವಣೆ ಆಗುತ್ತಲೇ ಇವೆ. ಆದರೆ ಇದಕ್ಕಿರುವ ಒಂದು ಗುಣವೆಂದರೆ ಸಾಮಾಜಿಕ ಬದಲಾವಣೆ ಸಂಭವಿಸಿದ ಮೇಲೆ ಇದರಿಂದಾಗುವ ಪರಿಣಾಮದ ಬಗ್ಗೆ ಭವಿಷ್ಯ ನುಡಿಯುವುದು ಅಸಾಧ್ಯದ ಮಾತಾಗಿದೆ. ಅಂದರೆ ಬದಲಾವಣೆಯಿಂದಾಗಿ ಸಮಾಜದಲ್ಲಿ ಒಳ್ಳೆಯ ಪರಿಣಾಮ ಬೀರಬಹುದು. ಅಥವಾ ದುಷ್ಪರಿಣಾಮವನ್ನು ಸಹ ಬೀರಬಹುದು ಇದರ ಬಗ್ಗೆ ಹೇಳುವುದು ಕಷ್ಟ ಸಾಧ್ಯ.

ಉದಾ : ಶಿಕ್ಷಣ, ಕುಟುಂಬ, ವಿವಾಹ ಮೊದಲಾದ ಸಂಸ್ಥೆಗಳು ಮೊದಲು ಬಹಳ ಸರಳವಾಗಿದ್ದವು. ಸಾಮಾಜಿಕ ಬದಲಾವಣೆ ಪರಿಣಾಮವಾಗಿ ಇವುಗಳಲ್ಲಿ ಸಂಕೀರ್ಣತೆ ಉಂಟಾಯಿತು. ಇದರೊಂದಿಗೆ ಕೆಲವು ಉತ್ತಮ ಪರಿಣಾಮಗಳು ಬೀರಿದರೆ ಇನ್ನು ಕೆಲವು ವಿಷಯಗಳಲ್ಲಿ ದುಷ್ಪರಿಣಾಮಗಳನ್ನು ಬೀರಿದವು.

ಒಂದು ಕಾಲದಲ್ಲಿ ಅಂದರೆ ಪ್ರಾಚೀನ ಕಾಲದಲ್ಲಿ ಸಮಾಜ ಸರಳವಾಗಿತ್ತು. ಇದರಲ್ಲಿ ವಾಸಿಸುವ ಜನರ ಜೀವನ ವಿಧಾನಗಳೂ ಕೂಡ ಸರಳವಾಗಿತ್ತು. ಸಾಮಾಜಿಕ ಬದಲಾವಣೆ ಗತಿಯಲ್ಲಿ ಉಂಟಾದ ತೀವ್ರತೆಯಿಂದಾಗಿ ಇಂದು ಸಮಾಜ ಸಂಕೀರ್ಣತೆ ಕಡೆಗೆ ಚಲಿಸುತ್ತಿದೆ ಇದರಿಂದ ಸಮಾಜದಲ್ಲಿ ಅನೇಕ ರೀತಿಯ ಸಮಸ್ಯೆಗಳು ತಲೆದೋರುತ್ತಿವೆ. ಈ ಸಮಸ್ಯೆಗಳಲ್ಲಿ ಒಂದಕ್ಕೆ ಪರಿಹಾರ ಹುಡುಕಲು ಹೊರಟಾಗ ಮತ್ತೊಂದು ಸಮಸ್ಯೆ ಉದ್ಭವಿಸುತ್ತದೆ. ಕಾರಣ ಅನೇಕ ವಿಷಯಗಳು ಇಂದು ಸಮಸ್ಯೆಗಳಾಗಿಯೇ ಉಳಿದಿವೆ. ಇದರಿಂದಾಗಿ ಸಮಾಜದಲ್ಲಿ ಸಂಘರ್ಷ, ಸ್ಪರ್ಧೆ, ಯುದ್ಧ ಮೊದಲಾದ ಮಾರಕ ಕ್ರಿಯೆಗಳು ಜರುಗುತ್ತಿವೆ.

ಸಾಮಾಜಿಕ ಬದಲಾವಣೆಯ ಹಿನ್ನೆಲೆಯಲ್ಲಿ ಬುಡಕಟ್ಟು ಸಮುದಾಯಗಳನ್ನು ನಾವು ಒಮ್ಮೆ ಅವಲೋಕಿಸಿದಾಗ ಅವುಗಳ ಅನೇಕ ವಿಷಯಗಳಲ್ಲಿ ಬದಲಾವಣೆ ಅಥವಾ ಪರಿವರ್ತನೆಯನ್ನು ಕಂಡುಕೊಂಡಿರುವುದು ಕಂಡುಬರುತ್ತದೆ. ದಟ್ಟವಾದ ಜನಸಂಖ್ಯೆಯಿಂದ ಕೂಡಿದ ಬೇಡ ಸಮುದಾಯವು ಕೂಡ ಇಂತಹ ಪರಿಸರಕ್ಕೆ ಇಂದು ಹೊಂದಿಕೊಳ್ಳುತ್ತಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಮುಂದಿನ ಅಧ್ಯಾಯಗಳಲ್ಲಿ ಇವರಲ್ಲಿ ಆಗಿರುವ ಬದಲಾವಣೆಗಳ ಬಗ್ಗೆ ವಿವರಿಸಲಾಗಿದೆ. ಈ ಅಧ್ಯಯನಕ್ಕೆ ಕೂಡ್ಲಿಗಿ ಪಟ್ಟಣ ವ್ಯಾಪ್ತಿಯಲ್ಲಿ ಬರುವ ಬೇಡರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಸಾಮಾಜಿಕ ಬದಲಾವಣೆ ವಿಷಯಕ್ಕೆ ಸಂಬಂಧಿಸಿದಂತೆ ನಾವು ಇನ್ನು ಒಳಹೊಕ್ಕು ನೋಡಿದಾಗ ವಿವಿಧ ರೀತಿಯ ವಿಶಿಷ್ಟ ಸಂಗತಿಗಳು ನಮ್ಮ ಗಮನಕ್ಕೆ ಬರುತ್ತವೆ. ನಾವು ಗಮನದಲ್ಲಿರಿಸಿಕೊಳ್ಳಬೇಕಾದ ಒಂದು ವಿಷಯವೆಂದರೆ ಸಾಮಾಜಿಕ ಬದಲಾವಣೆಗೆ ಸಂಬಂಧಿಸಿದಂತೆ ಅನೇಕ ವ್ಯಾಖ್ಯೆಗಳನ್ನು ನೋಡಿದಾಗ ಇದರ ಗತಿ ನಗರದ ಪ್ರದೇಶಗಳಲ್ಲಿ ಹೆಚ್ಚು ಇರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಪಟ್ಟಣ ಪ್ರದೇಶಗಳಲ್ಲಿ

ನೆಲೆಸಿರುವ ಬಹುತೇಕ ಬುಡಕಟ್ಟು ಸಮುದಾಯಗಳು ಸಾಮಾಜಿಕ ಬದಲಾವಣೆ ಪ್ರಭಾವಕ್ಕೆ ಒಳಗಾಗಿವೆ. ಇಂತಹ ಪ್ರದೇಶಗಳಲ್ಲಿರುವ ಸಮುದಾಯಗಳಲ್ಲಿ ಈ ಹಿಂದೆ ಇದ್ದಂತಹ ಕಟ್ಟುನಿಟ್ಟಿನ ಕ್ರಮಗಳಲ್ಲಿ ಕೊಂಚ ಸಡಿಲಿಕೆ ಉಂಟಾದಂತೆ ಕಂಡುಬರುತ್ತದೆ. ಇವರ ಆಚಾರ, ವಿಚಾರ, ವೇಷ - ಭೂಷಣಗಳಲ್ಲಿ ಮಾರ್ಪಾಟಾಗಿರುವುದು ನಮಗೆ ಗೋಚರಿಸುವಂತಹ ವಿಷಯವಾಗಿದೆ. ಇಂತಹ ಪರಿವರ್ತನಾ ಗಾಳಿ ಬೇಡ ಸಮುದಾಯದವರ ಮೇಲೆ ಹೆಚ್ಚು ಪ್ರಭಾವ ಬೀರಿದೆ. ಈ ಸಮುದಾಯಗಳ ಜನರು ನಗರ, ಪಟ್ಟಣ, ಗ್ರಾಮಗಳಲ್ಲಿ ನೆಲೆಸಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಈ ಸಮುದಾಯದ ಜನರು ಕೂಡ ಬದಲಾವಣೆ ಅಲೆಗೆ ಸಿಲುಕಿದ್ದಾರೆ. ಆದರೆ ಪಟ್ಟಣಗಳಲ್ಲಿರುವ ಜನರಷ್ಟು ವೇಗವಾಗಿ ಬದಲಾಗುತ್ತಿಲ್ಲ. ಆದರೆ ಬದಲಾವಣೆ ಆಗಿರುವುದಂತೂ ನಿಜ.

ಬದಲಾವಣೆ ಹಾದಿ ತುಳಿದ ಇವರು ಪ್ರಸ್ತುತ ದಿನಗಳಲ್ಲಿ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಅಂಶಗಳಲ್ಲಿ ಪರಿವರ್ತಿತಗೊಂಡಿದ್ದಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ನಾವು ನೋಡುವುದಾದರೆ ಇವರ ಕುಟುಂಬ ವ್ಯವಸ್ಥೆ, ಬಂಧುತ್ವ, ಒಳಾಡಳಿತ ವಿವಾಹಗಳಲ್ಲಿ ಬದಲಾವಣೆಗಳನ್ನು ಕಾಣುತ್ತೇವೆ. ಅದರಂತೆ ಸಾಂಸ್ಕೃತಿಕ ಅಂಶಗಳಲ್ಲಿ ನೋಡುವುದಾದರೆ ಇವರ ಉಡುಗೆ, ತೊಡುಗೆ, ಆಚರಣೆ, ಸಂಪ್ರದಾಯ ಮೊದಲಾದ ಅನೇಕ ವಿಷಯಗಳಲ್ಲಿ ಬದಲಾಗಿರುವುದು ವೇದ್ಯವಾಗುತ್ತದೆ. ಇನ್ನು ವಿಶೇಷವಾಗಿ ಇವರು ನಿರ್ವಹಿಸುವ ಅಥವಾ ಅನುಸರಿಸುತ್ತಿದ್ದ ಕುಸುಬು / ವೃತ್ತಿಗಳಲ್ಲಿ ಬದಲಾವಣೆಯಾಗಿವೆ. ಈ ಹಿಂದೆ ಇವರಲ್ಲಿ ಪ್ರಚಲಿತದಲ್ಲಿದ್ದ ಅವಿಭಕ್ತ ಕುಟುಂಬಗಳು ಆಧುನಿಕತೆ, ನಗರೀಕರಣ, ಔದ್ಯೋಗೀಕರಣಗಳ ಪ್ರಭಾವದಿಂದಾಗಿ ಹಳ್ಳಿಗಳಲ್ಲಿದ್ದ ಈ ಜನರು ಉದ್ಯೋಗಗಳನ್ನರಸುತ್ತಾ ನಗರಗಳಿಗೆ ಬಂದರು ಹೀಗಾಗಿ ಇವರಲ್ಲಿದ್ದ ಅವಿಭಕ್ತ ಕುಟುಂಬ ಒಡೆದು ವಿಭಕ್ತ ಕುಟುಂಬಗಳಾಗಿವೆ. ಅದೇ ರೀತಿ ಇವರಲ್ಲಿ ಈ ಹಿಂದೆ ಇದ್ದು ಬಂಧುತ್ವ ಅಂದರೆ ಪರಸ್ಪರ ಒಬ್ಬರಿಂದ ಇನ್ನೊಬ್ಬರು ಕೊಡುವ ಹಾಗೂ ಪಡೆದುಕೊಳ್ಳುವ ಪ್ರೀತಿ, ಗೌರವ, ಮರ್ಯಾದೆ ಇಂತಹ ಅಂಶಗಳು ಇಂದು ನಗರ ಪ್ರದೇಶಗಳಲ್ಲಿ ಉಳಿದಿಲ್ಲ ಹಾಗೂ ಹಿಂದೆ ಇವರಲ್ಲಿ ಉದ್ಭವಿಸುವ ವ್ಯಾಜ್ಯ, ಸಮಸ್ಯೆಗಳನ್ನು ಇವರ ಜಾತಿ ಪಂಚಾಯ್ತಿಗಳೇ ಬಗೆಹರಿಸುತ್ತಿದ್ದವು. ಆದರೆ ಇಂದು ಇವುಗಳ ಪಾತ್ರ ಇಲ್ಲದಂತಾಗಿದೆ. ಇದು ಒಳಾಡಳಿತ ವ್ಯವಸ್ಥೆಯಲ್ಲಾದ ಬದಲಾವಣೆ. ಇನ್ನು ಇವರ ವಿವಾಹದ ವಿಷಯಕ್ಕೆ ಬಂದಾಗ ಇದರಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಇದರಲ್ಲಿ ಆಗುವ ಬದಲಾವಣೆ ಪ್ರಮಾಣ ಇಂದು ಗ್ರಾಮೀಣ ಪ್ರದೇಶಗಳಲ್ಲಿಯೂ ಕೂಡ ಕಂಡುಬರುತ್ತದೆ. ಈ ಹಿಂದೆ ಇಲ್ಲಿ ಮ್ಯಾಸಬೇಡರು ಹಾಗೂ ಊರುಬೇಡರು ವಿವಾಹವಾಗುತ್ತಿರಲಿಲ್ಲ ಆದರೆ ಆಧುನಿಕತೆ ಪ್ರಭಾವದಿಂದಾಗಿ ಇಲ್ಲಿ ಇಂತಹ ಸಾಕಷ್ಟು ವಿವಾಹಗಳು ಜರುಗಿವೆ. ಇವರಲ್ಲಿದ್ದ 'ತೆರ' ಪದ್ಧತಿ ಮಾಯವಾಗಿ ವರದಕ್ಷಿಣೆ ಪದ್ಧತಿ ಅದರ ಜಾಗವನ್ನು ಆಕ್ರಮಿಸಿಕೊಂಡಿದೆ.

ಇನ್ನೂ ಸಾಂಸ್ಕೃತಿಕ ಅಂಶಗಳಲ್ಲಿ ಈ ಸಮುದಾಯಗಳಲ್ಲಿ ಬದಲಾವಣೆಗಳಾಗಿವೆ. ಆದರೆ ಈ ಅಂಶಗಳಲ್ಲಿ ಬದಲಾವಣೆ ಪ್ರಮಾಣ ಸ್ವಲ್ಪ ಕಡಿಮೆ ಎಂದು ಹೇಳಬಹುದು. ಇವರು ಆಚರಿಸುವ ಕೆಲವು ಆಚರಣೆಗಳಲ್ಲಿ ಕೆಲವು ಪರಿವರ್ತನೆಗಳಾಗಿರುವ ಉದಾಹರಣೆಗಳಿವೆ. ಇವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಬೇಕಾಗುತ್ತದೆ. ಇವರ ವಾರ್ಷಿಕಾವರ್ತನ ಆಚರಣೆಗಳಲ್ಲಿ ಹಾಗೂ ಹಬ್ಬ ಆಚರಣೆಯ ವಿಷಯಗಳಲ್ಲಿ ಬದಲಾವಣೆ ಹೊಂದಿರುವುದು ಕಂಡುಬರುತ್ತದೆ.

ಬೇಡ ಸಮುದಾಯದಲ್ಲಿ ವಿಶೇಷವಾಗಿ ಗಮನಿಸಬೇಕಾದುದೆಂದರೆ ಅವರ ಕಸುಬುಗಳಲ್ಲಿ ಆಗಿರುವ ಪರಿವರ್ತನೆಗಳು ಮೊದಲಿಗೆ ಬೇಟೆ ಹಾಗೂ ಪಶುಪಾಲನೆಯೇ ಇವರ ಮುಖ್ಯ ಕಸುಬು ಆಗಿದ್ದ ಆ ಕಾಲ ಇಂದು ಬದಲಾಗಿ ಸಮಾಜದಲ್ಲಿರುವ ವಿವಿಧ ಉದ್ಯೋಗಗಳನ್ನು ಇವರು ಇಂದು ಅನುಸರಿಸುವಂತೆ ಮಾಡಿದೆ. ಹಾಗೂ ಹಲವಾರು ಪ್ರದೇಶಗಳಲ್ಲಿ ಇಂದು ಕೃಷಿಯನ್ನೇ ಅವಲಂಬಿಸಿ ಜೀವನ ಸಾಗಿಸುವಂತಹ ಪರಿಸ್ಥಿತಿಗಳಿವೆ. ಇನ್ನು ಕೆಲವು ಕಡೆ ಕೃಷಿಯಲ್ಲಿಯೇ ಪ್ರಗತಿ ಸಾಧಿಸಿರುವ ಉದಾಹರಣೆಗಳಿವೆ. ಇದಕ್ಕೆಲ್ಲ ಕಾರಣ ಸಾಮಾಜಿಕ ಬದಲಾವಣೆ ಇದಕ್ಕೆ ಈ ಮುಂದಿನ

"Changes in the agriculture techniques have affceted the rural Community with the invention of new agricultural tools and Chimical manures. Agriculture production has increased the raising the standared of Living of the rural people Fewer people are now needed for agriculture consequently many agriculture labourers have shifted to Cities to find employment"[೧೪] ವ್ಯಾಕ್ಯ ಇಂದು ಸೂಕ್ತವಾಗಿದೆ.

ಮುಂದಿನ ಅಧ್ಯಾಯಗಳಲ್ಲಿ ಇವುಗಳ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ. ಬೇಡರಲ್ಲಿ ಇಂದು ಆಗಿರುವ ಪರಿವರ್ತನೆಗೆ ಸಂಬಂಧಿಸಿದಂತೆ ಈ ಅಧ್ಯಯನದಲ್ಲಿ ಮೂರು ವಿಭಾಗಗಳನ್ನಾಗಿ ಮಾಡಿ ಅದರಲ್ಲಿ ಸಾಮಾಜಿಕ ವ್ಯವಸ್ಥೆ, ಆರ್ಥಿಕ ಹಾಗೂ ಶೈಕ್ಷಣಿಕ ಹಾಗೂ ಬೇಡರ ಸಾಂಸ್ಕೃತಿಕ ಬದುಕಿನ ಬದಲಾವಣೆ ಎಂಬುದಾಗಿ ವಿವರಿಸಲಾಗಿದೆ. ಇದರಲ್ಲಿ ಇವರ ಎಂತಹ ವಿಶಿಷ್ಟ ಅಂಶಗಳಲ್ಲಿ ಯಾವ ರೀತಿ ಬದಲಾವಣೆಗಳಾಗಿವೆ. ಕೆಲವು ಆಚರಣೆಗಳನ್ನು ಕೈಬಿಡದೆ ಅವುಗಳಿಗೆ ಪರ್ಯಾಯವಾಗಿ ಎಂತಹ ವ್ಯವಸ್ಥೆ ಮಾಡಿಕೊಂಡಿದ್ದಾರೆ ಎಂಬುದನ್ನು ವಿವರಿಸಲಾಗಿದೆ.

**ಅಡಿಟಿಪ್ಪಣಿಗಳು**


೧. Sociology Champion/ Kurth Hsatings/Herris, P. 474
೨. Chahgeology, D.M. Raviprasad, P. 1
೩. ಭಾರತೀಯ ಸಮಾಜ ಅಧ್ಯಯನ, ಎ.ಆರ್.ಕಟ್ಟಿ, ಪು. ೨೫೪
೪. ಸಮಾಜಶಾಸ್ತ್ರ ಪರಿಚಯ, ಚ.ನ.ಶಂಕರರಾವ್, ಪು. ೧೮೭
೫. Sociology 5th Edi, Donald Light, New Yark, P. 615
೬. ಸಮಾಜಶಾಸ್ತ್ರ, ಎಂ.ನಾರಾಯಣ, ವಿಶ್ವ ಪು. ೧೫೩
೭. ಸಮಾಜಶಾಸ್ತ್ರ, ಬಿ.ಮನೋಹರ, ರಾವ್ ಪು. ೨೦೧
೮. Sociology Champion/ Kurth (Hsatings/Herris), P. 474
೯. ಸಮಾಜಶಾಸ್ತ್ರ, ಬಿ.ಮನೋಹರರಾವ್ , ಪು. ೨೦೧
೧೦. Sociology 4th Edi, John J Macionis, P. 642
೧೧. Principles of Sociology, R.N. Sharma, P. 181
೧೨. Principles of Sociology, R.N. Sharma, P. 182
೧೩. ಸಮಾಜಶಾಸ್ತ್ರ, ಬಿ.ಮನೋಹರರಾವ್, ಪು. ೨೦೨
೧೪. A Hand Book of Sociology in Indian perspeetive, RAKA SHARMA, P. 190

# ೩

# ಬೇಡರ ಸಾಮಾಜಿಕ ಬದುಕಿನ ಹಿನ್ನೆಲೆ ಮತ್ತು ಬದಲಾವಣೆಗಳು

**ವಸತಿ ವ್ಯವಸ್ಥೆ**

ಕೃಷ್ಣಮೂರ್ತಿ ಹನೂರು ಅವರು ಉಲ್ಲೇಖಿಸಿರುವಂತೆ ಬೇಡನಾಯಕರಲ್ಲಿ ಎರಡು ಮುಖ್ಯ ಪಂಗಡಗಳಿವೆ. ಅವು ಊರನಾಯಕ ಮತ್ತು ಮ್ಯಾಸನಾಯಕ ಎಂದು. ನಂತರ ಅವರೇ ಹೇಳುವಂತೆ "ಊರನಾಯಕರು ಈಗಾಗಲೇ ಗ್ರಾಮಾಂತರ ಪ್ರದೇಶ, ಪಟ್ಟಣಗಳನ್ನು ಸೇರಿ ತಕ್ಕಷ್ಟು ವಿದ್ಯೆ, ಉದ್ಯೋಗ ಗಳಿಸಿ ನಾಗರೀಕರಾಗಿದ್ದಾರೆ. ಮ್ಯಾಸಬೇಡರು ಇನ್ನು ಕೊಂಚಮಟ್ಟಿಗೆ ಪ್ರತ್ಯೇಕವಾಗಿಯೇ ಊರಾಚೆ ಹಟ್ಟಿಕಟ್ಟಿಕೊಂಡು ವಾಸಿಸುತ್ತಿರುವ ದೃಶ್ಯ ಇಂದಿಗೂ ಜಗಳೂರು, ಮೊಳಕಾಲ್ಮೂರು, ಚಳ್ಳಕೆರೆ ತಾಲೂಕುಗಳಲ್ಲಿ ಕಾಣಬಹುದಾಗಿದೆ."[೧] ಆದರೆ ಕೂಡ್ಲಿಗಿ ತಾಲೂಕಿನ ಕಡೆ ಬಂದಾಗ ಈ ರೀತಿ ಕಾಣುವುದು ಸ್ವಲ್ಪ ಕಷ್ಟವಾಗುತ್ತದೆ. ಕೆಲವು ವರ್ಷಗಳ ಹಿಂದೆ ಬೇಡರು ತಮ್ಮ ಮನೆಗಳನ್ನು ಹಟ್ಟಿ ರೂಪದಲ್ಲಿ ಕಟ್ಟಿಕೊಳ್ಳುತ್ತಿದ್ದರು. ಹಟ್ಟಿ ಎಂದರೆ ಐವತ್ತು ಅರವತ್ತು ಸಣ್ಣಗುಡಿಸಲುಗಳ ಸಮೂಹವೆಂದು ಹೇಳಬಹುದು. ಅಲ್ಲಿ ಇವರು ತಮ್ಮ ಮನೆಗಳನ್ನು ಅಂಚೆಹುಲ್ಲು, ಲಕ್ಕಿಬರಲು ಇವುಗಳಿಂದ ನಿರ್ಮಿಸಿಕೊಳ್ಳುತ್ತಿದ್ದರು. ಹಟ್ಟಿಯೊಳಗೆ ಇತರರ ಪ್ರವೇಶ ಆಗದಂತೆ ಎಚ್ಚರಿಕೆ ವಹಿಸುತ್ತಿದ್ದರು. ಬದಲಾವಣೆ ಅಲೆಗೆ ಸಿಲುಕಿದ ಇವರಲ್ಲಿ ವಸತಿ ವ್ಯವಸ್ಥೆಯಲ್ಲಿ ವ್ಯತ್ಯಾಸವಾಗಿರುವುದನ್ನು ಗಮನಿಸಬಹುದು. ಕೂಡ್ಲಿಗಿಯು ಈಗ ನಿಧಾನಗತಿಯಲ್ಲಿ ಬೆಳೆಯುತ್ತಿರುವ ಪಟ್ಟಣವಾಗಿರುವುದರಿಂದ ಇಲ್ಲಿನ ಬೇಡರು ತಮ್ಮ ಮನೆಗಳನ್ನು ಊರಿನಲ್ಲಿ ತಮಗೆ ಬೇಕಾದ ವಿನ್ಯಾಸದಲ್ಲಿ ಕಟ್ಟಿಕೊಳ್ಳುತ್ತಿದ್ದಾರೆ. ಆಗಿನ ಅಂಚೆಹುಲ್ಲು,

ಲಕ್ಕಿಬರಲುಗಳ ಬದಲಾಗಿ ಸಿಮೆಂಟ್, ಇಟ್ಟಿಗೆ, ಗಾರೆ, ಕಬ್ಬಿಣ ಮೊದಲಾದ ಸಾಮಗ್ರಿಗಳನ್ನು ಉಪಯೋಗಿಸಿ ನಿರ್ಮಿಸಿಕೊಂಡಿದ್ದಾರೆ. ಇಲ್ಲಿ ಈ ಹಿಂದೆ ಇದ್ದ ಇವರ ಮನೆಗಳನ್ನು ಇಂದು ಇರುವ ಮನೆಗಳಿಗೆ ಹೋಲಿಸಿದಾಗ ಅದರಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. "ಒಂದು ಹೊತ್ತು ಊಟವಿಲ್ಲದಿದ್ದರೂ ಯಾರು ಕೇಳಲಾರರು ಆದರೆ ಮನೆ ಮಾತ್ರ ಚೆನ್ನಾಗಿರಬೇಕು" ಎಂಬುದು ಇವರಲ್ಲಿ ಮೂಡಿರುವ ಭಾವನೆ. ಮೊದಲಿಗೆ ದನಕರುಗಳನ್ನು ಹೆಚ್ಚಾಗಿ ಸಾಕುತ್ತಿದ್ದರು. ಅದಕ್ಕಾಗಿ ಇವರು ಪ್ರತ್ಯೇಕ ಕೊಟ್ಟಿಗೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ಕಾಲ ಬದಲಾದಂತೆ ದನಕರುಗಳನ್ನು ಮನೆಯ ಒಳಗೆ ಕಟ್ಟಿಕೊಳ್ಳುವ ಪರಿಸ್ಥಿತಿ ನಿರ್ಮಾಣವಾಯಿತು. ಪ್ರಸ್ತುತ ದಿನಗಳಲ್ಲಿ ಇಲ್ಲಿ ದನಕರುಗಳ ಸಂಖ್ಯೆ ಕ್ಷೀಣಿಸುತ್ತಿದ್ದು, ಅನೇಕ ಕೊಟ್ಟಿಗೆಗಳು ಅವುಗಳ ಜೊತೆಗೆ ಮಾಯವಾಗಿವೆ. ಇದಕ್ಕೆ ಇವರಲ್ಲಿ ಸಧ್ಯ ಕೃಷಿಗೆ ನೀಡಿರುವ ಆದ್ಯತೆ ಕಡಿಮೆ ಆಗಿರುವುದೇ ಕಾರಣವಾಗಿದೆ. ಕೂಡ್ಲಿಗಿ ಪಟ್ಟಣದಲ್ಲಿನ ಬೇಡರ ಮೇಲೆ ಇತರೆ ಸಮುದಾಯದವರ ಪ್ರಭಾವದ ಪರಿಣಾಮವಾಗಿ ವಸತಿ ವ್ಯವಸ್ಥೆಯಲ್ಲಿಯೂ ಸಹ ಬೇಡರು ಇತರರನ್ನು ಅನುಸರಿಸುತ್ತಿದ್ದಾರೆ. ಒಂದು ಮನೆ ಕಟ್ಟಿಸಬೇಕಾದರೆ ಜನರು ಈಗ ಮನೆಯಲ್ಲಿ ಹಾಲ್, ಟಿ.ವಿ.ಹಾಲ್, ಬೆಡ್ ರೂಂ ಗಳಿಗೆ ಆದ್ಯತೆ ನೀಡುತ್ತಾರೆ. ಇವರ ಮನೆಗಳನ್ನು ನೋಡಿದ ಮಾತ್ರಕ್ಕೆ ಇದು ಮ್ಯಾಸಬೇಡರ ಮನೆ, ಇದು ಊರುಬೇಡರ ಮನೆ ಎಂದು ಪ್ರತ್ಯೇಕಿಸಲು ಅಸಾಧ್ಯದ ಮಾತಾಗಿದೆ.

ಇನ್ನು ಕೆಲವು ಜನ ಬೇಡರು, ಸರ್ಕಾರಗಳು ನಿರ್ಮಿಸಿಕೊಟ್ಟ ಆಶ್ರಯ ಯೋಜನೆ ಮನೆಗಳಲ್ಲಿ ವಾಸವಾಗಿದ್ದಾರೆ. ಇದರಲ್ಲಿ ಅವರಿಗೆ ಪ್ರತ್ಯೇಕ ಕೊಟ್ಟಿಗೆ, ಅಡುಗೆಕೋಣೆಗಳು ಇನ್ನೆಲ್ಲಿಂದ ಬರಬೇಕು. ಇನ್ನು ಒಂದು ವಿಶೇಷತೆ ಎಂದರೆ ಈ ಹಿಂದೆ ಬೇಡರ ಮನೆಗಳ ನಿರ್ಮಾಣದಲ್ಲಿ ವಾಸ್ತು ಹೇಳುವವರ ಪಾತ್ರ ಇದ್ದಿಲ್ಲ. ಆದರೆ ಕಾಲ ಬದಲಾಗಿ ಈಗ ಕೆಲವರು ತಮ್ಮ ಮನೆಗಳನ್ನು ಕಟ್ಟುವಾಗ ವಾಸ್ತುಪ್ರಕಾರ ಕಟ್ಟಿಸುತ್ತಾರೆ. ಇದಕ್ಕೆ ವಾಸ್ತು ಹೇಳುವವರ ಸಹಾಯವನ್ನು ಕೂಡ ಬಳಸಿಕೊಳ್ಳುತ್ತಾರೆ. ಇವೆಲ್ಲವುಗಳನ್ನು ಗಮನಿಸಿದಾಗ ಒಟ್ಟಾರೆ ಇವರ ವಸತಿ ವ್ಯವಸ್ಥೆ ಕೇವಲ ಇಲ್ಲಿ ಮಾತ್ರವಲ್ಲದೆ ಹಲವು ಕಡೆಗಳಲ್ಲಿ ಬದಲಾವಣೆ ಹೊಂದಿರುವುದು ವೇದ್ಯವಾಗುತ್ತದೆ.

**೩.೨ ಕುಟುಂಬ ಪದ್ಧತಿ**

ಸಮಾಜದ ಅತ್ಯಂತ ಚಿಕ್ಕ ಘಟಕ ಕುಟುಂಬ. ಇದು ಪ್ರಾಚೀನ ಕಾಲದಿಂದಲೂ ಬೆಳೆದುಬಂದಿರುವ ಮಾನವ ನಿರ್ಮಿತ ಸಂಸ್ಥೆ. ಇಲ್ಲಿ ನಾವು ಗಮನಿಸಬೇಕಾದ ವಿಷಯವೆಂದರೆ, ಕುಟುಂಬ ವ್ಯವಸ್ಥೆ ಇಂದು ಹಲವು ಬಗೆಯ ರಚನಾತ್ಮಕ ಹಾಗೂ ಕಾರ್ಯಾತ್ಮಕ ಬದಲಾವಣೆಗೆ ಒಳಪಟ್ಟಿದೆ. "ಮನುಷ್ಯನ ಜೀವನದಲ್ಲಿ ಕುಟುಂಬವೇ ಸಮಾಜದ ಮೂಲ ಹಾಗೂ ಮುಖ್ಯ ಘಟಕ"[೨] ಎಂಬುದಾಗಿ ಮಾ.ಭ.ಪೆರ್ಲರವರು ಅಭಿಪ್ರಾಯಪಟ್ಟಿದ್ದಾರೆ. ಇದು ಅಕ್ಷರಶ ಸತ್ಯವಾದುದಾಗಿದೆ. ನಂತರ ಇವರು ಪುನಃ "ಕುಟುಂಬ ವ್ಯವಸ್ಥೆಯು ಮಾನವನ ಇತಿಹಾಸದಲ್ಲಿ ಮಾವನ ಸಮಾಜದ ಸಮುನ್ನತಿಯಲ್ಲಿ ಬಲು ದೊಡ್ಡ ಸಾಧನೆ ಅತಿ ಪ್ರಾಚೀನ ಕಾಲದಿಂದಲೂ ಯಶಸ್ವಿಯಾಗಿ ಸಾಗಿ ಬಂದಿರುವ ಸಾರ್ವದೇಶಿಕ, ಸಾರ್ವಕಾಲಿಕ ಸರ್ವೋಪಯೋಗಿಯಾಗಿರುವ ಅನ್ಯತಮ ಸಂಸ್ಥೆ ಕುಟುಂಬ!"[೩] ಎಂದು ಹೇಳಿದ್ದಾರೆ. ಇದರಂತೆ ಬುಡಕಟ್ಟು ಬದುಕಿನಲ್ಲಿ ವಿಶಿಷ್ಟವಾದ ಕುಟುಂಬ

ವ್ಯವಸ್ಥೆ ಇತ್ತು. ಅದರಂತೆ ಬೇಡರಲ್ಲಿಯೂ ಕುಟುಂಬ ವ್ಯವಸ್ಥೆ ಇದೆ. ಇವರು ಹೆಚ್ಚಾಗಿ ಅವಿಭಕ್ತ ಕುಟುಂಬಗಳಿಗೆ ಆದ್ಯತೆ ನೀಡುತ್ತಿದ್ದರು. ಪ್ರಸ್ತುತ ಕಾಲಘಟ್ಟದಲ್ಲಿ ಇವರ ಕುಟುಂಬ ವ್ಯವಸ್ಥೆಯಲ್ಲಿ ಆದ ಕೆಲವು ಪರಿವರ್ತನೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಇವರಲ್ಲಿ ಈ ಹಿಂದೆ ಇದ್ದ ಅವಿಭಕ್ತ ಕುಟುಂಬಗಳು ಛಿದ್ರಗೊಂಡಿವೆ. ಅದರಂತೆ ಪಿತೃಪ್ರಧಾನ ಹಾಗೂ ಮಾತೃಪ್ರಧಾನವಾಗಿರುವ ಕುಟುಂಬಗಳನ್ನು ನೋಡಬಹುದಾಗಿದೆ. ಬೇಡರು ಈ ಹಿಂದೆ ಸಾಮಾನ್ಯವಾಗಿ ಒಂದು ಕುಟುಂಬದಲ್ಲಿ ಎರಡು ತಲೆಮಾರಿನ ಹಿರಿಯರು ಒಂದೇ ಸೂರಿನಡಿಯಲ್ಲಿ ವಾಸವಾಗಿರುತ್ತಿದ್ದರು. ''ಸಾಮಾನ್ಯವಾಗಿ ಕುಟುಂಬದ ಸದಸ್ಯರು ಪ್ರತ್ಯೇಕವಾಗದೆ ಒಟ್ಟಿಗೆ ವಾಸಮಾಡುವ ಕುಟುಂಬವನ್ನು ಅವಿಭಕ್ತ ಕುಟುಂಬ ಎನ್ನುತ್ತೇವೆ''[೪] ಎಂಬ ಮಾತಿಗೆ ಸರಿದೂಗುವಂತೆ ಇದ್ದವು. ಪರಿವರ್ತನೆ ಹಾದಿ ತುಳಿದ ಬೇಡರ ಕುಟುಂಬ ಪದ್ಧತಿಯಲ್ಲಿ ನಾವು ಸಾಕಷ್ಟು ಬದಲಾವಣೆಗಳನ್ನು ಕಂಡಿದ್ದೇವೆ. ಅವಿಭಕ್ತ ಕುಟುಂಬ ಇಂದು ತನ್ನ ಅಸ್ತಿತ್ವವನ್ನು ಬದಲಾಯಿಸಿಕೊಂಡಿದೆ. ಪರಾಮರ್ಶಿಸಿ ನೋಡಿದಾಗ ಇಂತಹ ಕುಟುಂಬ ತನ್ನ ಮೂಲ ರೂಪವನ್ನು ಕಳೆದುಕೊಳ್ಳುತ್ತಿದೆ ಎಂಬಂತೆ ಭಾಸವಾಗುತ್ತದೆ. ಆದರೆ ಪೂರ್ಣ ಪ್ರಮಾಣದ ಬದಲಾವಣೆಗಳನ್ನು ಇಲ್ಲಿ ಕಾಣಲಾಗುವುದಿಲ್ಲ. ಇಂತಹ ಪರಿಸ್ಥಿತಿಗಳ ನಡುವೆಯೂ ಇಲ್ಲಿ ಅವಿಭಕ್ತ ಕುಟುಂಬಗಳಿರುವುದನ್ನು ಮರೆಯುವ ಹಾಗಿಲ್ಲ. ಇದಕ್ಕೆ ಇಲ್ಲಿರುವ ಗುಪ್ಪಾಲರು, ಮ್ಯಾಕಲರು, ಮಾಳ್ಗೇರು, ನಿರಕಲ್ಲಯ್ಯನವರು, ಪಾಲಯ್ಯನವರು, ಜಿಂಕಾಲರು ಇತ್ಯಾದಿ ಕುಟುಂಬಗಳೇ ಸಾಕ್ಷಿ. ಆದರೆ ಇವು ಈಗ ಕೇವಲ ಬೆರಳೆಣಿಕೆಯಷ್ಟು ಮಾತ್ರ ಇವೆ. ಕೆಲವು ಕುಟುಂಬಗಳಲ್ಲಿ ಈಗಲೂ ಸುಮಾರು ೨೦ ರಿಂದ ೨೫ ಜನರು ಒಟ್ಟಿಗೆ ವಾಸವಾಗಿರುವುದು ಕಂಡುಬರುತ್ತದೆ. ಆಧುನಿಕತೆ ಹಾಗೂ ನಗರೀಕರಣದ ಬೆಳವಣಿಗೆಯಿಂದಾಗಿ ಜನರು ಈಗ ತಮ್ಮದೇ ಆದ ಸ್ವತಂತ್ರ ಕುಟುಂಬ ಹೊಂದಿರಬೇಕು ಎಂಬ ಮನೋಭಾವ ಉಳ್ಳವರಾಗಿದ್ದಾರೆ. ಇದರಿಂದಾಗಿ ಮೊದಲಿದ್ದ ಹಾಗೆ ಅವಿಭಕ್ತ ಕುಟುಂಬಗಳು ಈಗಿಲ್ಲ. ಅಂದಿನ ಕುಟುಂಬಗಳು ತನ್ನ ಸದಸ್ಯರಿಗೆ ಭದ್ರತೆ, ಪೋಷಣೆ ಇತ್ಯಾದಿ ಬೇಡಿಕೆಗಳನ್ನು ಈಡೇರಿಸುತ್ತಿತ್ತು. ಪ್ರಸ್ತುತ ದಿನಗಳಲ್ಲಿ ಇಂತಹ ಕುಟುಂಬಗಳು ಈ ವಿಷಯಗಳಲ್ಲಿ ವಿಫಲವಾಗಿವೆ. ಇಂದು ಒಂದು ಮನೆಯಲ್ಲಿ ಕೇವಲ ಒಂದು ಗಂಡು, ಒಂದು ಹೆಣ್ಣು ಇದ್ದರೆ ಸಾಕು ಅದೇ ಒಂದು ಕುಟುಂಬವಾಗುತ್ತದೆ. ಇಂತಹ ಉದಾಹರಣೆಗಳು ಬೇಡರಲ್ಲಿ ಇಲ್ಲದಿಲ್ಲ.

**ಪಿತೃಪ್ರಧಾನ ಕುಟುಂಬ**

ಇಂದು ಭಾರತದ ಸಮಾಜದಲ್ಲಿ ಪುರುಷನೇ ಪ್ರಧಾನವಾಗಿರುವುದು ತಿಳಿದಿರುವ ವಿಷಯವಾಗಿದೆ. ಅದೇ ರೀತಿ ಕುಟುಂಬದ ವಿಚಾರಕ್ಕೆ ಬಂದರೂ ಸಹ ಇಲ್ಲಿ ಕೂಡ ಕೆಲವು ಪುರುಷಪ್ರಧಾನ ಅಥವಾ ಪಿತೃಪ್ರಧಾನವಾದ ಕುಟುಂಬಗಳನ್ನು ನಾವು ಕಾಣುತ್ತೇವೆ. ಒಟ್ಟಾರೆ ಕುಟುಂಬ ವ್ಯವಸ್ಥೆಯ ರಚನೆಯಲ್ಲಿ ಅಪಾರ ವೈವಿಧ್ಯತೆ ಹೊಂದಿದೆ. ''ಭಾರತದ ಬಹುತೇಕ ಸಮುದಾಯಗಳಲ್ಲಿ ತಂದೆಯ ಕಡೆಯಿಂದಲೇ ಗೋತ್ರವನ್ನು ಗುರುತಿಸಲಾಗುವುದು''[೫] ಎಂಬುದಾಗಿ ಶ್ಯಾಮಾಚರಣದುಬೆ ಅವರ ಅಭಿಪ್ರಾಯಪಟ್ಟಂತೆ ಇಂದು ನಾವು ಎಲ್ಲೆಡೆಯಲ್ಲಿಯೂ ಕಾಣುವ ಸತ್ಯ ಸಂಗತಿಯಾಗಿದೆ. ಅದರಂತೆ ''ನಾಯಕ ಸಮಾಜವು ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಗೆ ಒಳಪಟ್ಟಿದೆ.''[೬] ಇವರಲ್ಲಿ ಪಿತೃಪ್ರಧಾನ ಕುಟುಂಬಗಳು ಹೆಚ್ಚಾಗಿ ಕಂಡುಬರುತ್ತವೆ. ಅಂದರೆ ಇಲ್ಲಿ ಒಂದು ಕುಟುಂಬದಲ್ಲಿನ ಅಧಿಕಾರ ಅಥವಾ ಯಜಮಾನಿಕೆ ಒಬ್ಬ ಗಂಡಸಿನದಾಗಿರುತ್ತದೆ.

ಅವನು ಆ ಕುಟುಂಬವನ್ನು ನಿರ್ವಹಿಸುವ ಜವಬ್ದಾರಿಯನ್ನು ಹೊಂದಿರುತ್ತಾನೆ. ಇಂತಹ ಹಲವಾರು ಉದಾಹರಣೆಗಳನ್ನು ಕೂಡ್ಲಿಗಿ ಬೇಡರಲ್ಲಿ ಕಾಣಬಹುದಾಗಿದೆ. ಆದರೆ ಇದರ ಹಿಂದಿನ ಒಂದು ವಾಸ್ತವ ಸತ್ಯವನ್ನು ಅವಲೋಕಿಸಬೇಕಾಗಿದೆ. ಅದೇನೆಂದರೆ ಇಂದಿನ ಸಮಾಜದಲ್ಲಿನ ಪರಿಸ್ಥಿತಿಗನುಗುಣವಾಗಿ ಪುರುಷನು ಹಲವಾರು ದುಶ್ಚಟಗಳಿಗೆ ಬಲಿಯಾಗಿದ್ದಾನೆ. ಇಂದು ಕೇವಲ ಅವನು ನಾಮ ಮಾತ್ರಕ್ಕೆ ಆ ಕುಟುಂಬದ ಯಜಮಾನನಾಗಿರುವ ಪರಿಸ್ಥಿತಿ ಇದೆ. ಇದಕ್ಕೆ ಕಾರಣ ಸಾಮಾಜಿಕ ಬದಲಾವಣೆ ಹಾಗೂ ಇದರಿಂದಾಗಿ ಸಮಾಜದಲ್ಲಿ ತಲೆದೋರಿರುವ ಜೂಜು, ಕುಡಿತ ಇತ್ಯಾದಿ. ಇಂತಹ ಹಲವು ಕುಟುಂಬಗಳನ್ನು ನೋಡಬಹುದಾಗಿದೆ. ಇವನು ತನ್ನ ಕುಟುಂಬದ ಏಳಿಗೆಗಾಗಿ ದುಡಿಯದೇ ಕೇವಲ ತನ್ನ ದುಶ್ಚಟಗಳನ್ನು ಈಡೇರಿಸಿಕೊಳ್ಳಲು ಸಾಲ ಮಾಡುವ ಪರಿಸ್ಥಿತಿಗಳಿವೆ. ಈ ಸಮಸ್ಯೆ ಕೇವಲ ನಾವು ಕೂಡ್ಲಿಗಿಯಲ್ಲಿ ಅಲ್ಲದೇ ಕೇವಲ ಬೇಡರಲ್ಲಿ ಮಾತ್ರವಲ್ಲದೆ ದೇಶದೆಲ್ಲೆಡೆ ಕಾಣುವಂತಹ ಸಾಮಾನ್ಯ ಪರಿಸ್ಥಿತಿಯಾಗಿದೆ. ನಿಜಸ್ಥಿತಿ ಎಂದರೆ ಇಂತಹ ಕುಟುಂಬಗಳಲ್ಲಿ ಸಾಮಾನ್ಯವಾಗಿ ಹೆಂಗಸರು, ಮಕ್ಕಳು ದುಡಿದು ತಂದು ಮನೆಯ ಯಜಮಾನನನ್ನು ಸಾಕುವ ಸ್ಥಿತಿ ಇದೆ. ಎಷ್ಟೋ ಕುಟುಂಬಗಳು ಇಂತಹ ಬರಗಾಲ ಪರಿಸ್ಥಿತಿಯಲ್ಲಿ ಒಂದು ಹೊತ್ತಿನ ಊಟಕ್ಕೂ ಹೆಣಗಾಡುವ ಪ್ರಸಂಗಗಳೂ ಇಲ್ಲಿವೆ. ಆಧುನೀಕರಣಕ್ಕೆ ಒಳಪಡುವುದಕ್ಕಿಂತ ಮುಂಚೆ ಇದ್ದಂತಹ ಪರಿಸ್ಥಿತಿಗೆ ಹೋಲಿಸಿ ನೋಡಿದರೆ ಅಂದಿನ ದಿನಗಳಲ್ಲಿ ಸಮಸ್ಯೆಗಳು ಸ್ವಲ್ಪ ಕಡಿಮೆ ಇದ್ದವೇನೋ ಎನಿಸುತ್ತದೆ. ಹಾಗೆ ನೋಡಿದರೆ ಕೆಲವು ವ್ಯಕ್ತಿಗಳು ಆಧುನೀಕರಣ ಹಾಗೂ ನಗರೀಕರಣಕ್ಕೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾರೆ. ಕಾಲ ಹೀಗಿರುವಾಗಲೂ ಇಂತಹ ಕೆಲವು ಕುಟುಂಬಗಳು ಸಾಕಷ್ಟು ಬೆಳವಣಿಗೆಯನ್ನು ಹೊಂದಿವೆ.

**ಮಾತೃಪ್ರಧಾನ ಕುಟುಂಬ**

ಅಲೆಮಾರಿ ಜೀವನ ಸಾಗಿಸುತ್ತಿದ್ದ ಮಾನವನು ಮೊದಲಿಗೆ ಸಮಾಜದಲ್ಲಿ ತನ್ನ ತಾಯಿಯಿಂದ ಗುರುತಿಸಿಕೊಳ್ಳುತ್ತಿದ್ದನು. ಒಂದು ವಿಧದಲ್ಲಿ ಇದು ಮಾತೃಪ್ರಧಾನ ವ್ಯವಸ್ಥೆ ಆಗಿತ್ತು. ಕ್ರಮೇಣವಾಗಿ ಕಾಲಕಳೆದಂತೆ ಸಮಾಜದಲ್ಲಿ ಮಹಿಳೆಯ ಪಾತ್ರ ಕಡಿಮೆಯಾಗಿ ಪುರುಷಪ್ರಧಾನ ವ್ಯವಸ್ಥೆ ಜಾರಿಗೆ ಬಂದಿತು. ಇದಕ್ಕೆ ಮುಖ್ಯ ಕಾರಣ ಕೃಷಿಯಲ್ಲಾದ ಬದಲಾವಣೆ. ಆರಂಭದಲ್ಲಿ ಕೃಷಿಯನ್ನು ಅವಿಷ್ಕರಿಸಿದ ಕೀರ್ತಿ ಸ್ತ್ರೀಗೆ ಸಲ್ಲುತ್ತದೆ. ನಂತರದ ಕಾಲಘಟ್ಟದಲ್ಲಿ ಕೃಷಿಯಲ್ಲಿ ಉಂಟಾದ ಬದಲಾವಣೆಗಳಿಂದಾಗಿ ಕೇವಲ ಹಗುರವಾದ ಕೆಲಸಗಳನ್ನು ನಿರ್ವಹಿಸುವಲ್ಲಿ ಮುಂದಾದ ಮಹಿಳೆಗೆ ಪ್ರಾಶಸ್ತ್ಯ ಕಡಿಮೆ ಆಯಿತು. ಆಧುನಿಕ ಕಾಲದಲ್ಲಿ ಜೀವಿಸುತ್ತಿರುವ ನಾವು ಒಮ್ಮೆ ಸೂಕ್ಷ್ಮವಾಗಿ ಆಲೋಚಿಸಿದಾಗ ಮುಂದೆ ಒಂದು ದಿನ ಮತ್ತೆ ಮಾತೃಪ್ರಧಾನವಾದ ಸಮಾಜ ಮರುಕಳಿಸಬಹುದು ಎಂಬ ಶಂಕೆ ಮೂಡುತ್ತದೆ. ಇದಕ್ಕೆ ಇಂದು ಸಮಾಜದಲ್ಲಾದ ವಿವಿಧ ಪರಿವರ್ತನೆಗಳೇ ಸಾಕ್ಷಿ. ದಕ್ಷಿಣ ಭಾರತದಲ್ಲಿ ವಾಸಿಸುವ ಹಲವು ಆದಿವಾಸಿಗಳಲ್ಲಿ ಇಂದಿಗೂ ಮಾತೃಪ್ರಧಾನ ಸಮಾಜವಿರುವುದು ಕಂಡುಬರುತ್ತದೆ. ಅದರಂತೆ ಕೂಡ್ಲಿಗಿ ಪಟ್ಟಣ ವ್ಯಾಪ್ತಿಯಲ್ಲಿ ಬರುವ ಕೆಲವು ಕುಟುಂಬಗಳು ಮಾತೃಪ್ರಧಾನವಾಗಿವೆ. ಅಂದರೆ ಇಂತಹ ಕುಟುಂಬಗಳಲ್ಲಿ ತಾಯಿಯ ಜವಾಬ್ದಾರಿ ಹಾಗೂ ಅಧಿಕಾರ ಹೆಚ್ಚಾಗಿರುತ್ತದೆ. ಆ ಕುಟುಂಬವನ್ನು ಸಾಕಿ, ಸಲಹುವ ಸಂಪೂರ್ಣ ಕರ್ತವ್ಯ ಅವಳದಾಗಿರುತ್ತದೆ. ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಇಂತಹ ಹಲವಾರು ಕುಟುಂಬಗಳು ಕಂಡುಬಂದಿದ್ದು ಹೆಚ್ಚಾಗಿ ಅಂತಹ ಮನೆಗಳಲ್ಲಿ.

ಮನೆಮಗಳು (ದೇವದಾಸಿ) ಇರುತ್ತಾಳೆ. ಇವರೇ ಅದರ ಸಂಪೂರ್ಣ ಜವಾಬ್ದಾರಿ ಹೊತ್ತು, ತಂದೆ ತಾಯಿಯರನ್ನು ಸಾಕುವುದರಿಂದ ಹಿಡಿದು ಸದಸ್ಯರ ಹಲವಾರು ಬೇಡಿಕೆಗಳನ್ನು ಅವಳೇ ಈಡೇರಿಸುತ್ತಾಳೆ. ಇಂತಹ ಕುಟುಂಬಗಳು ಈ ಪ್ರದೇಶದಲ್ಲಿ ಮ್ಯಾಸಬೇಡರು ಹಾಗೂ ಊರಬೇಡರು ಇವೆರಡು ಗುಂಪುಗಳಲ್ಲಿ ಇವೆ. ಇಲ್ಲಿ ಹಿರಿಯರು ಅಥವಾ ತಂದೆ ಮಾಡಿದ ಆಸ್ತಿ, ಸಂಪತ್ತಿನಲ್ಲಿ ಇವಳಿಗೂ ತನ್ನ ಸಹೋದರರಂತೆ ಸಮಪಾಲು ಇರುತ್ತದೆ.

ಇಂತಹ ಕುಟುಂಬದ ಮುಖ್ಯಸ್ಥಳಾದ ಕೆಲವು ಮಹಿಳೆಯರು ಈ ಪ್ರದೇಶದಲ್ಲಿ ನಾಟಕ ವೃತ್ತಿಯನ್ನು ಅವಲಂಬಿಸಿದ್ದಾರೆ. ಈ ವೃತ್ತಿಯಲ್ಲಿಯೇ ಸಾಧನೆಗೈದು ಹಲವಾರು ಪ್ರಶಸ್ತಿ ಪಡೆದ ಕಲಾವಿದರು ಈ ಊರಿನಲ್ಲಿ ಇದ್ದಾರೆ. ಇಂತಹ ಕುಟುಂಬಗಳಲ್ಲಿ ಹೆಚ್ಚಾಗಿ ಶೈಕ್ಷಣಿಕ ಹಾಗೂ ಆರ್ಥಿಕವಾಗಿ ಬೆಳವಣಿಗೆ ಹೊಂದಿರುವುದನ್ನು ಕಾಣುತ್ತೇವೆ. ಇದು ಒಂದು ರೀತಿಯ ಪರಿವರ್ತನೆ ಏಕೆಂದರೆ ಒಂದು ಕಾಲದಲ್ಲಿ ಕೇವಲ ನಾಲ್ಕುಗೋಡೆಗಳ ಮಧ್ಯ ಜೀವಿಸಬೇಕಿದ್ದ ಈ ಸಮುದಾಯದ ಮಹಿಳೆ ಇಂದು ಒಂದು ಕುಟುಂಬದ ಸಂಪೂರ್ಣ ಜವಾಬ್ದಾರಿ ಹೊತ್ತು ಅದನ್ನು ನಿರ್ವಹಿಸುವ ಮಟ್ಟಿಗೆ ಬೆಳೆದುನಿಂತಿದ್ದಾಳೆ ಎಂದರೆ ಆಶ್ಚರ್ಯವೇ ಸರಿ. ಇದರಲ್ಲಿ ಇನ್ನು ಕೆಲವು ಮಹಿಳೆಯರು ಪ್ರತಿದಿನ ಕೃಷಿಕೂಲಿ ಕೆಲಸಕ್ಕೆ ಹೋಗಿ ತಮ್ಮ ಕುಟುಂಬವನ್ನು ನಿಭಾಯಿಸಿಕೊಂಡು ಹೋಗುತ್ತಾರೆ. ಈ ಬಗೆಯಲ್ಲಿ ಇಂತಹ ಕುಟುಂಬಗಳು ತಾವು ಇತರೆ ಕುಟುಂಬಗಳಿಗಿಂತ ಕಡಿಮೆ ಇಲ್ಲ ಎಂಬುದನ್ನು ತೋರಿಸಿಕೊಟ್ಟಿವೆ.

### ವಿಭಕ್ತ ಕುಟುಂಬ

ವಿಭಕ್ತ ಕುಟುಂಬ ಎಂದರೆ ಅವಿಭಕ್ತ ಕುಟುಂಬದಿಂದ ಬೇರ್ಪಟ್ಟ ಒಂದು ಚಿಕ್ಕ ಕುಟುಂಬ. ಈ ಮೊದಲು ಬೇಡರು ಒಂದಾಗಿರಲು ಎಷ್ಟು ಹಂಬಲಿಸುತ್ತಿದ್ದರೋ ಅದೇ ಪ್ರಮಾಣದಲ್ಲಿ ಈಗಿನ ಹೊಸತಲೆಮಾರಿನ ಜನ ಕುಟುಂಬದಿಂದ ಬೇರೆ ಆಗಲು ಹಂಬಲಿಸುತ್ತಿದ್ದಾರೆ. ಇದಕ್ಕೆ ಅವರಲ್ಲಿ ಮೂಡಿದ ಸ್ವಪ್ರಜ್ಞೆ . ಹಳೆ ತಲೆಮಾರಿನ ಜನರಿಗೆ ಅವಿಭಕ್ತ ಕುಟುಂಬದಿಂದ ಹೊರಬಂದು ಯಾವ ರೀತಿ ಜೀವಿಸಬೇಕೆಂಬುದೇ ಒಂದು ಸಮಸ್ಯೆಯಾಗಿತ್ತು ಹಾಗೂ ಅವರಲ್ಲಿ 'ನಾವು', 'ನಮ್ಮವರು' ಎಂಬ ಭಾವನೆ ಇತ್ತು. ಅದು ಇಂದಿನ ದಿನಗಳಲ್ಲಿ ಬದಲಾಗಿ 'ನಾನು', 'ನನ್ನದು' ಎಂಬ ಮನೋಧರ್ಮ ಬೆಳೆಯತೊಡಗಿದೆ. ಒಂದು ಮನೆಯಲ್ಲಿ ವಿವಾಹವಾಯಿತೆಂದರೆ ಮದುವೆಯಾದ ವ್ಯಕ್ತಿ ಕೇವಲ ಕೆಲವೇ ದಿನಗಳಲ್ಲಿ ಬೇರೆ ಮನೆ ಮಾಡಿಕೊಳ್ಳುವ ಮೂಲಕ ಪ್ರತ್ಯೇಕ ಜೀವನ ಸಾಗಿಸುತ್ತಾರೆ. ಇಂತಹ ಹಲವು ಉದಾಹರಣೆಗಳು ಇಲ್ಲಿವೆ. ಒಂದೇ ಒಂದು ದೊಡ್ಡ ಮನೆಯಲ್ಲಿ ತಂದೆ ಮಕ್ಕಳು ಪ್ರತ್ಯೇಕವಾಗಿರುವುದನ್ನು ಹಾಗೂ ಅಂತಹ ಮನೆಗಳಿಗೆ ಅಡ್ಡಗೋಡೆಗಳನ್ನು ನಿರ್ಮಿಸಿಕೊಂಡಿರುವುದನ್ನು ನೋಡಬಹುದಾಗಿದೆ. ಕೆಲವು ಮನೆಗಳಲ್ಲಿ ಮಕ್ಕಳು ದುಡಿಯದೇ ಸೋಮಾರಿಯಾಗಿ ಅಲೆಯುತ್ತಿದ್ದರೆ ಅವನಿಗೆ ತಂದೆ-ತಾಯಿಗಳೇ ಮದುವೆ ಮಾಡಿ ಬೇರೆ ಮನೆ ಮಾಡಿಕೊಟ್ಟಿರುವ ಪ್ರಸಂಗಗಳೂ ಇವೆ. ಇದರಿಂದ ಅವರಿಗೆ ಜವಾಬ್ದಾರಿ ಹೆಚ್ಚಾಗಿ ದುಡಿದು ತಿನ್ನುವ ಮನೋಭಾವ ಬೆಳೆದು ಇತರರಂತೆ ಜೀವನ ನಡೆಸುತ್ತಾನೆ ಎಂಬ ನಂಬಿಕೆ ಹಿರಿಯರಲ್ಲಿದೆ. ಇನ್ನು ಕೆಲವರು ಸ್ವಇಚ್ಛೆಯಿಂದ ಹೊರಬಂದು ಸ್ವತಂತ್ರ ಜೀವನ ನಡೆಸುತ್ತಿದ್ದಾರೆ. ಹೀಗೆ ಈ ಪ್ರದೇಶದ ಬೇಡರ ಕುಟುಂಬ ವ್ಯವಸ್ಥೆಯಲ್ಲಿ ಅವಿಭಕ್ತ ಹಾಗೂ ವಿಭಕ್ತ ಕುಟುಂಬ ಪದ್ಧತಿಗಳೆರಡೂ ಕಂಡುಬಂದರೂ ಹೆಚ್ಚಿನ ಪ್ರಮಾಣದಲ್ಲಿ ವಿಭಕ್ತ ಕುಟುಂಬ ವ್ಯವಸ್ಥೆ ಬೆಳವಣಿಗೆ ಹೊಂದುತ್ತಿರುವುದು ಕಂಡುಬರುತ್ತಿದೆ.

ಈ ಪರಿಸ್ಥಿತಿಗೆ ಸರಿಹೊಂದುವಂತೆ ಮಾ.ಭ.ಪರ್ಲರವರು ಈ ಕೆಳಗಿನಂತೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ವಿಘಟಿತ ಕುಟುಂಬಗಳಿಂದಾಗಿ ಕುಟುಂಬದ ವ್ಯಾಖ್ಯೆ ಬದಲಾಯಿಸಬೇಕಾಗಿ ಬಂದಿದೆ. ಅದೆಂದರೆ "A More or less durable association of husband wife with or without chileren or of a man or woman with children"[೬] ಎಂಬ ಹೇಳಿಕೆಗೆ ಪ್ರಸ್ತುತ ಸಮಾಜದಲ್ಲಿನ ಕುಟುಂಬ ವ್ಯವಸ್ಥೆಗಳಿಗೆ ಯಥೋಚಿತವಾಗಿದೆ.

**೩.೩ ಬಂಧುತ್ವ**

ರಕ್ತ ಸಂಬಂಧದಿಂದಲೋ ಹಾಗೂ ಕೆಲವು ವಿವಾಹದ ಮೂಲಕವೋ ಸಂಬಂಧಗಳನ್ನು ಪರಿಗಣಿಸಲಾಗುತ್ತದೆ. ಬಂಧುತ್ವಕ್ಕೆ ವಿಶಿಷ್ಟವಾದ ಸ್ಥಾನಮಾನವಿದೆ. ಒಂದು ನಡವಳಿಕೆ ಇದೆ. ಇದು ರಕ್ಷಣೆ, ವಿಶ್ವಾಸ, ಎಚ್ಚರ, ಕಾಳಜಿ, ಆತ್ಮೀಯತೆ, ಗೌರವ ಮುಂತಾದವುಗಳನ್ನು ಒಳಗೊಂಡಿರುತ್ತದೆ. ಬಂಧುತ್ವವು ಮುಖ್ಯವಾಗಿ ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳ ಪಾತ್ರಗಳನ್ನು ಕೂಡ ವಹಿಸುತ್ತದೆ. ಆದರೆ ಆಧುನಿಕ ಔದ್ಯಮಿಕ ಸಮಾಜದಲ್ಲಿ ಬಂಧುತ್ವದ ಕೇಂದ್ರವು ಸವೆದು ಹೋಗಿದೆ ಎಂಬುದನ್ನು ಮರೆಯುವ ಹಾಗಿಲ್ಲ. ಬದಲಾವಣೆ ಗಾಳಿ ಕೇವಲ ಇವರ ಕುಟುಂಬ ಹಾಗೂ ವಸತಿ ವ್ಯವಸ್ಥೆಗಳ ಮೇಲಲ್ಲದೆ ಇವರಲ್ಲಿರುವ ಬಂಧುತ್ವಕ್ಕೂ ಕೂಡ ತಾಗಿದೆ. ಇದರ ಪ್ರಭಾವ ಕೇವಲ ಬೇಡರ ಸಮುದಾಯಕ್ಕೆ ಮಾತ್ರವಲ್ಲದೆ, ಇತರೆ ಸಮುದಾಯಗಳ ಮೇಲೂ ಬೀರಿದೆ. ಇದಕ್ಕೆ ಸಂಬಂಧಿಸಿದಂತೆ ಇವರಲ್ಲಿ ಬಂಧುತ್ವ ಕಲ್ಪನೆ ಎಂಬುದು ಸ್ವಲ್ಪ ಸಡಿಲಗೊಂಡಿದೆ ಎಂದೆನಿಸುತ್ತದೆ. ಪರಸ್ಪರ ಇವರಲ್ಲಿ ತಂದೆ - ಮಗ, ಅತ್ತೆ - ಮಾವ, ತಾಯಿ - ಮಕ್ಕಳು, ಸಹೋದರ - ಸಹೋದರಿ, ಗಂಡ - ಹೆಂಡತಿ ಎಂಬಿತ್ಯಾದಿ ಸಂಬಂಧಗಳಲ್ಲಿ ಮೊದಲಿದ್ದಷ್ಟು ಗಟ್ಟಿತನ ಈಗ ಇಲ್ಲವೆನಿಸುತ್ತದೆ. ಒಂದು ಮನೆಯಲ್ಲಿ ಪ್ರತಿ ಸದಸ್ಯರೂ ತಮ್ಮದೇ ಆದ ಸ್ಥಾನವನ್ನು ಈ ಹಿಂದೆ ಹೊಂದಿದ್ದರು. ಆದರೆ ಇಂದು ಕೆಲವು ಮನೆಗಳಲ್ಲಿ ಅವರ ಸ್ಥಾನ ಕಳೆದುಕೊಂಡಿದ್ದಾರೆ. ಒಂದು ವಿಷಯಕ್ಕೆ ಸಂಬಂಧಿಸಿದಂತೆ ಒಂದು ಮನೆಯಲ್ಲಿ ಹಿರಿಯರು ಅಥವಾ ತಂದೆ - ತಾಯಿಗಳ ನಿರ್ಣಯಗಳೇ ಅಂತಿಮವಾಗಿರುತ್ತಿದ್ದವು. ಅದಕ್ಕೆ ತಕ್ಕಂತೆ ಇತರೆ ಸದಸ್ಯರು ವಿಧೇಯರಾಗಿ ನಡೆದುಕೊಳ್ಳುತ್ತಿದ್ದರು. ಹಿರಿಯರು ಕೂಡ ಉತ್ತಮವಾಗಿ ನಡೆದುಕೊಳ್ಳುತ್ತಿದ್ದರು.

ಬದಲಾವಣೆ ಅಲೆಗೆ ಸಿಕ್ಕ ಇಂದಿನ ನವಪೀಳಿಗೆಯ ಜನರು ಇದಕ್ಕೆಲ್ಲ ಸಾಧ್ಯವಾದಷ್ಟು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಒಂದು ಕಾಲದಲ್ಲಿ ಒಬ್ಬರು ತಮ್ಮ ಮಗಳ ವಿವಾಹ ಮಾಡಬೇಕಾದರೆ ಅವಳ ಸೋದರಮಾವನ ಒಪ್ಪಿಗೆ ಕೇಳುತ್ತಿದ್ದರು. ಆದರೆ ಈಗ ಇಂತಹ ಪ್ರಸಂಗಗಳೇ ಇಲ್ಲ. ಒಬ್ಬ ಮಗ ತನ್ನ ತಂದೆ - ತಾಯಿ ಎದುರಿಗೆ ದುಶ್ಚಟಗಳಿಗೆ ಮಾರುಹೋಗಿರುವ ಉದಾಹರಣೆಗಳಿವೆ. ಇದನ್ನು ಪ್ರತಿರೋಧಿಸಲು ತಂದೆ - ತಾಯಿಯರು ವಿಫಲರಾಗಿದ್ದಾರೆ. ಇದಕ್ಕೆ ಕಾರಣ ಮಕ್ಕಳಲ್ಲಿ ಇವರ ಬಗ್ಗೆ ಗೌರವ ಕಡಿಮೆಯಾಗುತ್ತಿರುವುದು. ಇದಕ್ಕೆ ವ್ಯತಿರಿಕ್ತವಾಗಿ ಒಬ್ಬ ತಂದೆ ತನ್ನ ಮಕ್ಕಳು ಕುಟುಂಬದ ಸದಸ್ಯರ ಎದುರಿಗೆ ಇಂತಹ ದುರ್ವರ್ತನೆಗಳನ್ನು ಮಾಡುವ ದೃಶ್ಯಗಳು ಕಾಣಬಹುದಾಗಿದೆ. ಪರಸ್ಪರ ಒಬ್ಬರ ಮಾತನ್ನು ಒಬ್ಬರು

ಕೇಳದೇ ಹೋಗುವ ಪರಿಸ್ಥಿತಿಗಳಿವೆ. "ಈಗ ನಮ್ಮ ಸ್ವಂತ ಮಕ್ಕಳೇ ನಮ್ಮ ಮಾತನ್ನು ಕೇಳುವುದಿಲ್ಲ" ಎಂಬುದಾಗಿ ಶ್ರೀ ವಿ.ವೆಂಕಟೇಶ್ ಎಂಬ ವಕ್ತ್ರ ಅಭಿಪ್ರಾಯ ಪಟ್ಟಿದ್ದಾರೆ. ಮಕ್ಕಳು ತಮ್ಮ ತಂದೆ - ತಾಯಿಯವರು ವೃದ್ಧರಾದಾಗ ಅವರನ್ನು ನೋಡಿಕೊಳ್ಳುವುದಿರಲಿ ಮನೆಯಲ್ಲಿ ಇರಿಸಿಕೊಳ್ಳುವುದೇ ದಂಡವೆಂದು ಭಾವಿಸಿದ್ದಾರೆ. ಇದರಿಂದ ಮಾನವನಲ್ಲಿರುವ ಸಂಬಂಧಗಳು ಹೇಗೆ ಕಡಿಮೆಯಾಗುತ್ತಿವೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಎಷ್ಟೋ ಜನ ಯುವಕರು ಇಂದು ತಮ್ಮ ಕುಟುಂಬದಲ್ಲಿ ಇರದೇ ನನಗೆ ಸಂಬಂಧವಿಲ್ಲ ಎನ್ನುವ ರೀತಿಯಲ್ಲಿ ಇದ್ದಾರೆ. ಇನ್ನು ವಿಶೇಷ ಆಚರಣೆ ಮದುವೆ ಮೊದಲಾದವುಗಳಿಗೆ ಸಂಬಂಧಿಸಿದಂತೆ ಈ ಹಿಂದೆ ಊರಿನ ಹಿರಿಯರ ಹಾಗೂ ಇತರರ ಮನೆಯ ಸದಸ್ಯರ ಸಲಹೆ ಸೂಚನೆಗಳನ್ನು ಅಪೇಕ್ಷಿಸುತ್ತಿದ್ದರು. ಆದರೆ ಇಂದು ಇಂತಹ ಸಲಹೆಗಳನ್ನು ಒಪ್ಪಿಕೊಳ್ಳುವುದಿಲ್ಲ. ಒಂದೇ ಮನೆಯಲ್ಲಿ ತಂದೆ ಒಂದು ಕಡೆ ಮಕ್ಕಳು ಒಂದು ಕಡೆ ಇರುವುದನ್ನು ನೋಡಬಹುದಾಗಿದೆ. ಇನ್ನು ಕೆಲವರು ತಮ್ಮ ಬಂಧುಗಳನ್ನೇ ಮರೆತಿರುವಂತಿದೆ. ಇದು ಇಂತಹ ಪ್ರದೇಶಗಳಲ್ಲಿ ಸಾಮಾನ್ಯವಾದ ವಿಷಯವಾಗಿದೆ. ಇದು ಕೇವಲ ಬೇಡರಲ್ಲಿ ಮಾತ್ರವಲ್ಲದೆ ಇತರೆ ಜಾತಿ ಜನಾಂಗಗಳಲ್ಲಿ ಕಂಡುಬರುವ ಅಂಶವಾಗಿದೆ. ಸಮಾಜ ಹೆಚ್ಚು ಹೆಚ್ಚು ಬೆಳೆದು ಸಂಕೀರ್ಣವಾಗುತ್ತಾ ಹೋದಂತೆಲ್ಲ ಸದಸ್ಯರುಗಳ ನಡುವಿನ ನಿಕಟತಮ ಬಾಂಧವ್ಯ ಶಿಥಿಲವಾಗುತ್ತಿದೆ.

**೩.೪ ಒಳಾಡಳಿತ ವ್ಯವಸ್ಥೆ**

ಪ್ರತಿಯೊಂದು ಬುಡಕಟ್ಟು ಸಹ ತನ್ನದೇ ಆದ ಒಳಾಡಳಿತ ವ್ಯವಸ್ಥೆ ಅಥವಾ ಜಾತಿಪಂಚಾಯ್ತಿಯನ್ನು ಹೊಂದಿರುವುದು ವಿಶೇಷವಾದ ಸಂಗತಿ, ಇದು ಸರ್ವೇ ಸಾಮಾನ್ಯ. ಇದರಂತೆ ಬೇಡರು ತಮ್ಮದೇ ಆದ ಪ್ರತ್ಯೇಕ ಒಳಾಡಳಿತ ವ್ಯವಸ್ಥೆ ಹೊಂದಿದ್ದಾರೆ. "ಬೇಡನಾಯಕರು ತಮ್ಮ ನಡುವಣ ಯಾವುದೇ ರೀತಿಯ ವ್ಯಾಜ್ಯ, ನ್ಯಾಯಗಳನ್ನು ಬೇರೆಲ್ಲ ಬುಡಕಟ್ಟುಗಳಂತೆ ಅವರೇ ತೀರ್ಮಾನಿಸಿಕೊಳ್ಳುತ್ತಾರೆ"[೮] ಎಂಬುದಾಗಿ ಶ್ರೀ ಹನೂರು ಅವರು ಹೇಳಿದ್ದಾರೆ. ಇದು ಈ ಹಿಂದೆ ಕಾಣುತ್ತಿದ್ದ ಅಂಶವಾಗಿದೆ. ಸದ್ಯದ ಪರಿಸ್ಥಿತಿಯಲ್ಲಿ ಈ ಮಾತು ಸತ್ಯಕ್ಕೆ ದೂರವಾದಂತಿದೆ. ಇದಕ್ಕೂ ಮೊದಲು ನಾವು ನೋಡಿರುವ ಹಾಗೆ ಬದಲಾವಣೆಗಳ ಪಟ್ಟಿಯಲ್ಲಿ ಒಳಾಡಳಿತ ವ್ಯವಸ್ಥೆಯೂ ಸೇರಿದೆ. ಮೊದಲಿಗೆ ಕೂಡ್ಲಿಗಿ ಪ್ರದೇಶದಲ್ಲಿನ ಬೇಡರಲ್ಲಿ ಜಗಳ, ವ್ಯಾಜ್ಯಗಳಾದರೆ ಅವುಗಳನ್ನು ಗುಂಪಿನಿಂದ ಹೊರಗೆ ಹೋಗದಂತೆ ಕಾಪಾಡಿಕೊಳ್ಳುತ್ತಿದ್ದರು. ಈಗಲೂ ಇದಕ್ಕೆ ನಿದರ್ಶನವೆಂಬಂತೆ ಚಿತ್ರದುರ್ಗ ಜಿಲ್ಲೆಯಲ್ಲಿ ಕಟ್ಟೆಮನೆಗಳಿವೆ. ಇದಕ್ಕೆ ಸಂಬಂಧಿಸಿದಂತೆ ಕೂಡ್ಲಿಗಿಯಲ್ಲಿ ಮೊದಲು ಚಿಕ್ಕಪುಟ್ಟ ವ್ಯಾಜ್ಯಗಳನ್ನು ಪಂಚಾಯ್ತಿಕಟ್ಟೆಗಳಲ್ಲಿ ತೀರ್ಮಾನಿಸಲಾಗುತ್ತಿತ್ತು. ಇತ್ತೀಚೆಗೆ ಪರಿವರ್ತನೆಯೆಡೆಗೆ ಸಾಗುತ್ತಿರುವ ಬೇಡರು ಚಿಕ್ಕ ಪುಟ್ಟ ಕಾರಣಗಳಿಗಾಗಿ ಕೋರ್ಟು, ಕಛೇರಿ, ಕೇಸುಗಳೆಂದು ಹೋಗುತ್ತಾರೆ. ಈಗಲೂ ಹಲವಾರು ವ್ಯಾಜ್ಯಗಳು ಕೋರ್ಟಿನಲ್ಲಿವೆ. ಹಿಂದಿನ ಹಾಗೆ ಈಗ ಜಾತಿಯಿಂದ ಹೊರಹಾಕುವ ಹಾಗೂ ಪಂಚಾಯ್ತಿ ವಿಧಿಸಿರುವ ಶಿಕ್ಷೆ ಅನುಭವಿಸುವ ಸಾಕಷ್ಟು ಪದ್ಧತಿಗಳು ನಶಿಸಿವೆ. "ನನ್ನ ೩೦-೪೦ ವರ್ಷಗಳ ಜೀವಿತ ಅವಧಿಯಲ್ಲಿ ಒಬ್ಬರನ್ನು ಜಾತಿಯಿಂದ ಹೊರಹಾಕಿರುವ ಪ್ರಸಂಗವನ್ನು ನಾನು ಕಂಡಿಲ್ಲ" ಎಂಬುದಾಗಿ ಶ್ರೀಮತಿ ನಾಗಮ್ಮ ಎಂಬ ವಕ್ತ್ರ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇಂದು ಅನೇಕ ರೀತಿಯ ಯೋಜನೆ, ಸಂಘ ಸಂಸ್ಥೆಗಳು, ಪೊಲೀಸು, ಕಾನೂನುಗಳು ಇವರ ಒಳಾಡಳಿತ ವ್ಯವಸ್ಥೆಯಲ್ಲಿ ಹಿಡಿತ ಸಾಧಿಸಿವೆ. ಒಂದು ತಪ್ಪು ಮಾಡಿದ ವ್ಯಕ್ತಿ ಇಂದು ತನ್ನ ಜಾತಿ ಪಂಚಾಯತಿಗೆ ಹೆದರದೆ ಪೊಲೀಸರಿಗೆ ಹೆದರುವ ಸನ್ನಿವೇಶಗಳನ್ನು ಕಾಣಬಹುದಾಗಿದೆ.

## ಪಂಚಾಯ್ತಿ ಕಟ್ಟೆಗಳು

ಕೂಡ್ಲಿಗಿ ಪಟ್ಟಣದಲ್ಲಿ ಸುಮಾರು ಐದು ಪಂಚಾಯ್ತಿ ಕಟ್ಟೆಗಳು ಕಂಡುಬರುತ್ತವೆ. ಒಂದು ಕಾಲದಲ್ಲಿ ಬೇಡರು ಈ ಕಟ್ಟೆಗಳ ಮೇಲೆ ತಮ್ಮ ಸಮಸ್ಯೆಗಳನ್ನು ಹಾಗೂ ಇತರೆ ನಿರ್ಣಯಗಳನ್ನು ಕೈಗೊಳ್ಳುತ್ತಿದ್ದರು. ಇಲ್ಲಿ ನೀಡುವ ತೀರ್ಮಾನಗಳೇ ಅಂತಿಮವಾಗಿರುತ್ತಿದ್ದವು. ಊರು ಬೆಳೆದಂತೆ ಇವರೊಂದಿಗೆ ಇತರೆ ಸಮುದಾಯದ ಜನರು ಬಂದು ವಾಸಿಸತೊಡಗಿದರು. ಅದರೊಂದಿಗೆ ಇವುಗಳಿಗೆ ನೀಡುವ ಮಹತ್ವ ಕಡಿಮೆಯಾಯಿತು. ಇಂದು ಪಂಚಾಯ್ತಿ ಕಟ್ಟೆಗಳ ಮೇಲೆ ಯಾವುದೇ ರೀತಿಯಾದ ಪಂಚಾಯ್ತಿ ನಡೆಯುವುದಿಲ್ಲ ಪ್ರತಿಯೊಂದು ಕಟ್ಟೆಗಳ ಮೇಲೆ ಇವರು ಕೆಲವು ದೇವರ ಕಲ್ಲುಗಳನ್ನು ಇಟ್ಟು ಅವುಗಳನ್ನು ದೇವರ ಕಟ್ಟೆಗಳೆಂದು ಪರಿಗಣಿಸಿದ್ದಾರೆ. ವರ್ಷಕ್ಕೊಮ್ಮೆ ಈ ದೇವರುಗಳಿಗೆ ಪೂಜೆ, ಹಬ್ಬಗಳನ್ನು ಮಾಡುತ್ತಾರೆ. ೭ನೇ ವಾರ್ಡಿನ ವಕ್ತೃ ಶ್ರೀಮತಿ ಚೌಡಮ್ಮ ಎಂಬುವವರು ಹಿಂದಿನ ಕಾಲಕ್ಕ ನಮ್ಮಪ್ಪ ನಮ್ಮ ಮನೆ ಮುಂದಿರೋ ಕಟ್ಟೆ ಮೇಲೆ ನ್ಯಾಯ ತೀರ್ಮಾನ ಮಾಡುತ್ತಿದ್ದ. ಆದರೆ ಇಂದು ಇಂತಹ ಯಾವುದೇ ನ್ಯಾಯ ತೀರ್ಮಾನ ಮಾಡದಿಲ್ಲ'' ಎಂಬುದಾಗಿ ಅವರ ಮನೆ ಮುಂದೆ ಇರುವ ಪಂಚಾಯ್ತಿಕಟ್ಟೆ ತೋರಿಸಿ ಹೇಳಿದ್ದಾರೆ. ಇಂತಹ ಕಟ್ಟೆಗಳ ಮೇಲೆ ಕುಳಿತು ನಿಷ್ಪಕ್ಷಪಾತವಾಗಿ ನ್ಯಾಯ ತೀರ್ಮಾನಿಸುವ ವ್ಯಕ್ತಿಗಳೇ ಇಂದು ಕಾಣದಾಗಿದ್ದಾರೆ. ಇಂತಹ ಪರಿಸ್ಥಿತಿ ಇರುವಾಗ ಇನ್ನು ಪಂಚಾಯ್ತಿ ಕಟ್ಟೆಗಳೆಲ್ಲಿಯ ಮಾತು ಎಂಬುವ ಕಾಲ ಇದಾಗಿದೆ.

## ದೈವದ ಮನೆಗಳು

ಇಲ್ಲಿನ ಬೇಡರು ಕೆಲವು ಮುಖ್ಯವಾದ ವಿಷಯಗಳ ಬಗ್ಗೆ ಚರ್ಚೆ ನಡೆಸಿ ತೀರ್ಮಾನ ಕೈಗೊಳ್ಳಲು, ಪಂಚಾಯ್ತಿ ಕಟ್ಟೆಗಳಿಗೆ ಪರ್ಯಾಯವಾಗಿ ಇತ್ತೀಚಿನ ದಿನಗಳಲ್ಲಿ, ದೈವದ ಮನೆಗಳೆಂದು ಮಾಡಿಕೊಂಡಿದ್ದಾರೆ. ಪ್ರತಿ ಒಂದು ಅಥವಾ ಎರಡು ವಾರ್ಡಿನ ಬೇಡ ಸಮುದಾಯದ ಜನರು ಸೇರಿ ಒಂದು ದೈವದಮನೆ ಸ್ಥಾಪಿಸಿಕೊಂಡಿದ್ದಾರೆ. ಇದಕ್ಕೆ ಕೆಲವು ಜನ ಮುಖ್ಯಸ್ಥರಿರುತ್ತಾರೆ. ಇಲ್ಲಿ ಯಾವುದೇ ರೀತಿಯ ವ್ಯಾಜ್ಯಗಳು ತೀರ್ಮಾನವಾಗದೇ, ಕೇವಲ ವಿವಾಹಕ್ಕೆ ಸಂಬಂಧಿಸಿದ ಕೆಲಸ ನಿರ್ವಹಿಸುತ್ತದೆ. ಹಿಂದೆ ಇವರಲ್ಲಿ ಮ್ಯಾಸಬೇಡರು ಹಾಗೂ ಊರಬೇಡರು ಪ್ರತ್ಯೇಕ ದೈವದ ವ್ಯವಸ್ಥೆ ಹೊಂದಿದ್ದರು. ಇಲ್ಲಿ ವಿವಾಹ, ಹಬ್ಬ, ಜಾತ್ರೆ ಇಂತಹ ವಿಷಯಗಳ ಬಗ್ಗೆ ಮಾತ್ರ ಚರ್ಚಿಸಲಾಗುತ್ತದೆ. ಇವರು ಇದಕ್ಕೆ ಸಂಬಂಧಿಸಿದಂತೆ ಒಂದೊಂದು ದೈವಕ್ಕೆ ಒಂದು ಕಟ್ಟಡ ಕಟ್ಟಿಸಿಕೊಂಡಿದ್ದಾರೆ. ಮದುವೆ ಕಾರ್ಯದಲ್ಲಿ ಇದರ ಪಾತ್ರ ಹಿರಿದಾದುದಾಗಿದೆ. ವಿವಾಹಕ್ಕೆ ಸಂಬಂಧಿಸಿದ ಇಳೇವು ಒಡೆಯುವ ಹಾಗೂ ಇದರ ಮುಖ್ಯಸ್ಥ ನಿಂತು ಮದುವೆ ಮಾಡಿಸುವ ಜವಾಬ್ದಾರಿ ಹೊಂದಿದ್ದಾನೆ. ಇಂದು ಇಂತಹ ಕೆಲವು ವಿಷಯಗಳಲ್ಲಿ ಬದಲಾವಣೆಯಾಗಿರುವುದನ್ನು ಗಮನಿಸಬಹುದಾಗಿದೆ. ಇದಕ್ಕೆ ಸಾಕ್ಷಿ ಎಂಬಂತೆ ಕೂಡ್ಲಿಗಿ ೭ನೇ ವಾರ್ಡು (೧೩ ಡಿವಿ) ಬರುವ ಮ್ಯಾಸಬೇಡರ ದೈವಕ್ಕೆ ಊರ / ಬೇಡರ ವ್ಯಕ್ತಿ ಮುಖ್ಯಸ್ಥನಾಗಿದ್ದಾನೆ. ಊರು ಬೇಡರ ವ್ಯಕ್ತಿ ಮುಂದೆ ನಿಂತು ಮ್ಯಾಸಬೇಡರ ಮದುವೆ ಕಾರ್ಯಗಳನ್ನು ಜರುಗಿಸಿಕೊಡುವ ಆಶ್ಚರ್ಯ ಸಂಗತಿ ಇಲ್ಲಿದೆ. ಇದರಿಂದ ನಮಗೆ ಈ ಪ್ರದೇಶದಲ್ಲಿ ಈಗ ಮ್ಯಾಸಬೇಡರು ಹಾಗೂ ಊರುಬೇಡರು ಎಂಬ ಭಿನ್ನತೆ ಅಳಿಸುತ್ತಿದೆ. ಇನ್ನು ಕೇವಲ ಕೆಲವೇ ವರ್ಷಗಳಲ್ಲಿ ಇವೆರಡು ಪಂಗಡಗಳು ಒಂದಾಗುವಲ್ಲಿ ಸಂಶಯವಿಲ್ಲ.

ಇವರ ಒಳಾಡಳಿತ ವ್ಯವಸ್ಥೆಯಲ್ಲಿ ಇನ್ನು ಕೆಲವು ಬದಲಾವಣೆಗಳಾಗಿರುವುದನ್ನು ಕಾಣಬಹುದಾಗಿದೆ. "ಬೇಡರ ಗುಂಪಿನಲ್ಲಿ ಯಾರಾದರೂ ಕೋಳಿ ತಿಂದರೆ ಮದ್ಯಪಾನ ಮಾಡಿದರೆ ಕೊನೆಗೆ ಈಚಲು ಹಣ್ಣು ತಿಂದರೂ ದಂಡಹಾಕುವ ಪದ್ಧತಿ ಇತ್ತು. ಆದರೆ ಈಗ ಅದೆಲ್ಲವೂ ಹೋಗಿದೆ" ಎಂದು ಹನೂರು ಅವರು ಈ ಹಿಂದೆಯೇ ಅಭಿಪ್ರಾಯಪಟ್ಟಿರುವರು. ಈಗ ಇಂತಹ ಕೆಲವು ಪಟ್ಟಣ ಪ್ರದೇಶಗಳಲ್ಲಿ ಸತ್ಯವಾಗಿರುವಂತಹ ಸನ್ನಿವೇಶವಾಗಿದೆ. ಇಂತಹ ಪದ್ಧತಿಗಳನ್ನು ಕೈಬಿಟ್ಟಿದ್ದಾರೆ. ಈಗ ಇವರ ಆಹಾರ ಪದ್ಧತಿಯಲ್ಲಿಯೂ ಕೆಲವು ಬದಲಾವಣೆಗಳಾಗಿರುವುದು ತಿಳಿದುಬರುತ್ತದೆ. ಸಾಮಾನ್ಯವಾಗಿ ಇಲ್ಲಿನ ಮ್ಯಾಸಬೇಡರು ಹಾಗೂ ಊರುಬೇಡರು ಕೋಳಿಮಾಂಸವನ್ನು ಉಪಯೋಗಿಸುತ್ತಾರೆ. ಇನ್ನು ಕೆಲವು ಜನ ಮ್ಯಾಸಬೇಡರು ತಮ್ಮ ಮನೆಗಳಲ್ಲಿಯೇ ಕೋಳಿಗಳನ್ನು ಸಾಕುವುದು ಸಾಮಾನ್ಯವಾಗಿ ಇಲ್ಲಿ ಕಂಡುಬರುವ ದೃಶ್ಯವಾಗಿದೆ. ಇವುಗಳಲ್ಲದೇ ಇವರ ವಿವಾಹದ ಕೆಲವು ವಿಷಯಗಳಲ್ಲೂ ಬದಲಾವಣೆಗಳಾಗಿರುವುದನ್ನು ಗಮನಿಸಬಹುದು. ಪ್ರಸ್ತುತ ದಿನಗಳಲ್ಲಿ ಜಾತಿಪಂಚಾಯತಿ ಮಾಡುವ ಹಾಗೂ ಈ ದೈವದ ಮನೆಗಳ ನಿರ್ವಹಿಸದೇ ಇರುವ ಕೆಲಸಗಳನ್ನು ಇತರೆ ಸರ್ಕಾರದ ಯೋಜನೆಗಳು ನೆರವೇರಿಸುತ್ತಿವೆ. ಇದಕ್ಕೆ ಉದಾಹರಣೆಯಾಗಿ ಹಲವು ಅಂಶಗಳಿವೆ. ರಾಜಕೀಯ ಪ್ರವೇಶದಿಂದಾಗಿ ಜನರಲ್ಲಿ ವೈಮನಸ್ಸು ಮೂಡಿರುವುದರಿಂದ ಜನರು ಒಬ್ಬರ ಮಾತು ಒಬ್ಬರು ಕೇಳದೆ ವೈಯಕ್ತಿಕ ದ್ವೇಷಗಳಿಗಾಗಿ ಕೋರ್ಟು, ಪೊಲೀಸು, ಕಾನೂನುಗಳ ಮೊರೆ ಹೋಗುತ್ತಿದ್ದಾರೆ. ಚಿಕ್ಕ ಮಕ್ಕಳು ಕೂಡ ಪೋಲೀಸು, ಕೋರ್ಟುಗಳ ಬಗ್ಗೆ ತಿಳಿದುಕೊಂಡಿದ್ದಾರೆ. ಈಗ ಪಂಚಾಯ್ತಿಗಳಲ್ಲಿ ನ್ಯಾಯತೀರ್ಮಾನ ಮಾಡಲು ಯಜಮಾನರು ಸಹ ಹಿಂಜರಿಯುತ್ತಾರೆ. ಹುಡುಗರು ನಮ್ಮ ಮಾತುಗಳನ್ನು ಕೇಳುವುದಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಒಟ್ಟಾರೆ ಈ ಸಮಾಜದಲ್ಲಿ ಪಂಚಾಯ್ತಿ ತೀರ್ಮಾನ ಬಹಳ ಕಡಿಮೆಯಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಎಷ್ಟೇ ದೊಡ್ಡ ಜಗಳ ವ್ಯಾಜ್ಯಗಳಾದರು ಬೇರೆಲ್ಲೊ ಇದ್ದಿರಬಹುದಾದ ಅದೇ ಬುಡಕಟ್ಟಿನ ಯಜಮಾನರಿಂದ ತೀರ್ಮಾನವಾಗಲೇಬೇಕಿದ್ದ ಹಾಗೂ ಬುಡಕಟ್ಟಿನ ಎಲ್ಲ ಸದಸ್ಯರು ಪಂಚಾಯ್ತಿ ದೈವದವರ ತೀರ್ಮಾನಗಳಿಗೆ ತಲೆ ಬಾಗಲೇ ಬೇಕಾಗುವಂತಹ ಸ್ಥಿತಿ ಇಲ್ಲವಾಗಿದೆ. ಒಂದು ಕಾಲದಲ್ಲಿ ಬೇಡರ ಹಟ್ಟಿಗಳಿಗೆ ಇತರರ ಪ್ರವೇಶವೇ ಆಗದಂತೆ ಎಚ್ಚರ ವಹಿಸುತ್ತಿದ್ದರು. ಇಂದಿಗೂ ಚಿತ್ರದುರ್ಗ, ಚಳ್ಳಕೆರೆ ಸುತ್ತಮುತ್ತಲಿನ ಬೇಡರಲ್ಲಿ ಇಂತಹ ಪರಿಸ್ಥಿತಿ ಇದೆ. ಆದರೆ ನಗರ ಪ್ರದೇಶ ಹಾಗೂ ಪಟ್ಟಣಗಳಲ್ಲಿ ಇಂತಹ ವ್ಯವಸ್ಥೆ ಕಾಣುವುದು ಸ್ವಲ್ಪ ಕಡಿಮೆ. ಅದೇ ರೀತಿ ಈ ಊರಿನ ನಾಯಕರ ಓಣಿಗಳಿಗೆ ಹಾಗೂ ಅವರ ಮನೆಗಳಿಗೂ ಇತರರು ಬಂದು ಹೋಗುವ ದೃಶ್ಯಗಳೂ ಇವೆ. ಇದಕ್ಕೆ ಕಾರಣ ಶಿಕ್ಷಣ, ನಗರೀಕರಣ, ಆಧುನೀಕರಣ ಇತ್ಯಾದಿ. ಶಾಲಾ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಈ ಸಮುದಾಯದ ಮಕ್ಕಳೊಂದಿಗೆ ಇತರೆ ಜನಾಂಗದ ಮಕ್ಕಳು ಬಂದು ಹೋಗುತ್ತಾರೆ. ಇದಕ್ಕೆ ಯಾವುದೇ ರೀತಿಯಲ್ಲಿ ಅಡ್ಡಿ ಆತಂಕಗಳಿಲ್ಲ. ಇಂತಹ ಪರಿಸ್ಥಿತಿಗಳನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳಲೇಬೇಕಾಗಿದೆ. ಒಂದು ಕಾಲದಲ್ಲಿ ಮನೆ ಅಂಗಳದ ಮುಂದೆ ಕೇವಲ ಒಂದು ಕೋಳಿಕಂಡರೆ ಸಾಕು ಸಿಡಿದೇಳುವ ಇವರು ಸದ್ಯ ಇವರೇ ಕೋಳಿಗಳನ್ನು ಸಾಕುತ್ತಿದ್ದಾರೆ. ಇದು ಇವರ ಪರಿಸರದಲ್ಲಿ ವಾಸಿಸುತ್ತಿರುವ ಇತರೆ ಜನಾಂಗದವರ ಪ್ರಭಾವ. ಇದಕ್ಕೆ ಹಿರಿಯರ ಯಾವುದೇ ರೀತಿಯ ವಿರೋಧ ವ್ಯಕ್ತಪಡಿಸುವುದಿಲ್ಲ.

ಇಂತಹ ಸಾಕಷ್ಟು ಕಟ್ಟುನಿಟ್ಟಿನ ವಿಧಿಗಳು ಇಂದು ಬದಲಾವಣೆ ಕಡೆಗೆ ಸಾಗಿ ಮಾಯವಾಗುತ್ತಿವೆ. ಒಳಾಡಳಿತ ವ್ಯವಸ್ಥೆ ಎಂಬ ಮನೆಗೆ ಇರುವ ವಿಧಿಗಳು ಸಿಮೆಂಟ್ ಕಾಂಕ್ರೀಟಿನ ಅಕ್ಕಳೆಗಳಂತೆ ಕಾಲಕಳೆದಂತೆ ಒಂದೊಂದಾಗಿ ಉದುರಿ ಹೋಗುತ್ತಿವೆ. ಎಲ್ಲದಕ್ಕೂ ಕಾಲವೆಂಬುದು ಸೀಮಿತವಾಗಿದೆ. ಇನ್ನೂ ಕೆಲಕಾಲ ಕಳೆದರೆ ಈಗಿರುವ ಅಲ್ಪ ಸ್ವಲ್ಪ ಅಂಶಗಳು ಸಂಪೂರ್ಣವಾಗಿ ಆಧುನೀಕರಣಗೊಳ್ಳುವಲ್ಲಿ ಸಂದೇಹವಿಲ್ಲ. ಸಮಾಜ ಸಂಕೀರ್ಣಗೊಂಡಂತೆಲ್ಲಾ ಮಾನವನ ಜೀವನವೂ ಸಹ ಇದರೊಂದಿಗೆ ಸಂಕೀರ್ಣಗೊಳ್ಳುತ್ತಿದೆ. ಬುಡಕಟ್ಟು ಬದುಕಿನಲ್ಲೂ ರಾಜಕೀಯವೆಂಬ ಭೂತ ನುಗ್ಗಿ ಇವರಲ್ಲಿನ ಒಂದು ಉತ್ತಮ ರೀತಿಯ ಒಳಾಡಳಿತ ವ್ಯವಸ್ಥೆಯನ್ನು ನುಂಗಿಹಾಕಿದೆ. ಇದು ಇನ್ನೂ ಮುಂದಿನ ದಿನಗಳಲ್ಲಿ ಹಲವು ರೀತಿಯ ಬದಲಾವಣೆಗಳಾಗುವಲ್ಲಿ ಸಂದೇಹವಿಲ್ಲ.

**ಸಾಂತ್ವನ ಮಹಿಳಾ ಸಹಾಯ ವಾಣಿಕೇಂದ್ರ**

ಮೇಲಿನ ತಲೆಬರಹವನ್ನು ನೋಡಿದಾಕ್ಷಣ ಬೇಡರ ಒಳಾಡಳಿತ ವ್ಯವಸ್ಥೆಯಲ್ಲಿ ಇದರ ಕೆಲಸವೇನು ಎಂಬ ಪ್ರಶ್ನೆ ಮೂಡುತ್ತದೆ. ಆದರೆ ವಾಸ್ತವ ಸ್ಥಿತಿಯೇ ಬೇರೆ. ಮುಂದೆ ಓದಿದಾಗ ಈ ಪ್ರಶ್ನೆಗೆ ಉತ್ತರ ದೊರಕುತ್ತದೆ. ಇತ್ತೀಚಿನ ಒಂದು ಬದಲಾವಣೆ ಎಂದರೆ ಬಳ್ಳಾರಿ ಜಿಲ್ಲೆಯಲ್ಲಿ ಕರ್ನಾಟಕ ಸರ್ಕಾರ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ವತಿಯಿಂದ ಬಳ್ಳಾರಿ ನಗರ ಹಾಗೂ ಕೂಡ್ಲಿಗಿ ಪಟ್ಟಣದಲ್ಲಿ ಮಹಿಳಾ ಸಹಾಯವಾಣಿ ಕೇಂದ್ರಗಳನ್ನು ತೆರೆಯಲಾಗಿದೆ. ದೌರ್ಜನ್ಯ ಹಾಗೂ ಅತ್ಯಾಚಾರಕ್ಕೊಳಗಾದ ಮಹಿಳೆಯರಿಗೆ ನೆರವು ನೀಡುವ ಯೋಜನೆ ಇದಾಗಿದೆ. ಈ ರೀತಿ ಅನ್ಯಾಯಕ್ಕೊಳಗಾದ ಮಹಿಳೆಯರಿಗೆ ಸ್ವಾವಲಂಬಿಯಾಗಿ ಜೀವನ ನಡೆಸಲು ಪ್ರೇರೇಪಿಸಬೇಕೆಂಬುದು ಇದರ ಮುಖ್ಯ ಉದ್ದೇಶವಾಗಿದೆ. ಇದು ಇತ್ತೀಚೆಗಷ್ಟೆ ಸ್ಥಾಪಿತವಾಗಿರುವ ಯೋಜನೆಯಾಗಿದೆ. ಇದರ ವತಿಯಿಂದ ಕೂಡ್ಲಿಗಿ ಪಟ್ಟಣದಲ್ಲಿ ಸಾಂತ್ವನ ಸಹಾಯ ವಾಣಿಕೇಂದ್ರವು ಪ್ರಾರಂಭವಾಗಿದೆ. ಇಲ್ಲಿ ನಾವು ಗಮನಿಸಬೇಕಾದ ಒಂದು ಅಂಶವೆಂದರೆ ಮಹಿಳೆಯರಿಗೆ ಆದ ಅನ್ಯಾಯವನ್ನು ಸರಿಪಡಿಸಿ ಅವರ ಜೀವನಕ್ಕೆ ಭದ್ರತೆ ಒದಗಿಸುವ ಈ ಸಹಾಯವಾಣಿ ಕೇಂದ್ರಕ್ಕೆ ಇಂದು ಹಲವಾರು ದೂರುಗಳು ಬರುತ್ತಿವೆ. ಬೇಡರ ಮಹಿಳೆಯರಿಗೆ ಸಂಬಂಧಿಸಿದ ಇಂತಹ ದೂರುಗಳು ಹಲವಾರು ಇಲ್ಲಿ ಬಂದಿವೆ. ಒಂದು ಕಾಲದಲ್ಲಿ ಕೇವಲ ಇವರ ಜಾತಿ ಪಂಚಾಯ್ತಿ ನಿರ್ವಹಿಸುತ್ತಿದ್ದ ಕಾರ್ಯವನ್ನು ಇಂದು ಇಂತಹ ಸಹಾಯವಾಣಿ ಕೇಂದ್ರಗಳು ಹಾಗೂ ಇತರೆ ಯೋಜನೆಗಳು ನಿರ್ವಹಿಸುತ್ತಿವೆ. ಕೂಡ್ಲಿಗಿ ತಾಲೂಕಿನ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಜನರು ಹೆಚ್ಚಾಗಿ ವಾಸಿಸುವುದರಿಂದ ಈ ಕೇಂದ್ರಕ್ಕೆ ಹೆಚ್ಚಾಗಿ ಇವರಿಗೆ ಸಂಬಂಧಿಸಿದ ಪ್ರಕರಣಗಳು ಬರುತ್ತಿವೆ. ಈ ಕೇಂದ್ರ ಇದುವರೆಗೂ ೬೧ ಪ್ರಕರಣಗಳನ್ನು ದಾಖಲಿಸಿಕೊಂಡಿದ್ದು ಅದರಲ್ಲಿ ೨೨ ಪ್ರಕರಣಗಳನ್ನು ವಿಲೇವಾರಿ ಮಾಡಿದೆ. ಅದರಲ್ಲಿ ೧೦ ಪ್ರಕರಣಗಳು ಪರಿಶಿಷ್ಟ ಪಂಗಡಕ್ಕೆ ಸೇರಿವುಗಳಾಗಿವೆ. ಇದರಿಂದ ಬೇಡರಲ್ಲಿರುವ ಒಳಾಡಳಿತ ವ್ಯವಸ್ಥೆ ಯಾವ ರೀತಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ ಎಂಬುದನ್ನು ಗಮನಿಸಬಹುದಾಗಿದೆ. ಇನ್ನು ವಿಶೇಷವಾದ ಸಂಗತಿ ಎಂದರೆ ಕೂಡ್ಲಿಗಿ ಪಟ್ಟಣದಲ್ಲಿರುವ ಈ ಸಹಾಯವಾಣಿಕೇಂದ್ರಕ್ಕೆ ಮುಖ್ಯ ಸಲಹೆಗಾರರಾಗಿ ನಾಯಕ ಸಮುದಾಯದ ಮಹಿಳೆ ಆಯ್ಕೆಗೊಂಡಿರುವುದು.

ಈ ಯೋಜನೆ ಈ ಕೆಳಕಂಡಂತಹ ಉದ್ದೇಶಗಳನ್ನು ಹೊಂದಿದೆ.

- ಅನ್ಯಾಯ / ದೌರ್ಜನ್ಯಕ್ಕೊಳಗಾದ ಮಹಿಳೆಯರಿಗೆ ನ್ಯಾಯ ದೊರಕಿಸಿಕೊಡುವುದು ಹಾಗೂ ಇವರ ಮಕ್ಕಳಿಗೆ ಉಚಿತ ಶಿಕ್ಷಣ ನೀಡುವುದು ಹಾಗೂ ವಸತಿ ನಿಲಯಗಳಿಗೆ ದಾಖಲಿಸುವುದು.
- ಇಂತಹ ಮಹಿಳೆಯರಿಗೆ ಆರ್ಥಿಕವಾಗಿ ಸುಮಾರು ೨೫,೦೦೦ ರೂಪಾಯಿಗಳವರೆಗೆ ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಧನಸಹಾಯ ಒದಗಿಸುವುದು.
- ತುರ್ತು ಪರಿಸ್ಥಿತಿಗಳಲ್ಲಿ ದೂರವಾಣಿ ಮೂಲಕ ಈ ಕೇಂದ್ರವನ್ನು ಸಂಪರ್ಕಿಸಲು ಒಳಬರುವ ಕರೆಗಳಿಗೆ ಉಚಿತ ಸೌಲಭ್ಯ ಕಲ್ಪಿಸಲಾಗಿದೆ.
- ಕೌನ್ಸಿಲರ್ / ಸಲಹೆಗಾರರು ಅಗತ್ಯವಿದ್ದಾಗ ದೂರು ನೀಡುವವರ ಮನೆಗಳಿಗೆ ಭೇಟಿ ನೀಡಿ ಅವರ ದೂರನ್ನು ದಾಖಲಿಸಿಕೊಳ್ಳುವುದು.
- ಇದು ಇನ್ನು ಬೆಳವಣಿಗೆ ಹಂತದಲ್ಲಿರುವ ಒಂದು ಯೋಜನೆ ಆಗಿದೆ.

### ೩.೫ ವಿವಾಹ

ಪ್ರಸ್ತುತ ಅಧ್ಯಯನದಲ್ಲಿ ವಿವಾಹಕ್ಕೆ ಹೆಚ್ಚು ಆದ್ಯತೆ ನೀಡಿಲಾಗಿದ್ದು, ಇದರಲ್ಲಿ ಆಗಿರುವ ಬದಲಾವಣೆ ಬಗ್ಗೆ ಹೆಚ್ಚು ವಿವರಿಸಲಾಗಿದೆ. ವಿವಾಹವು ಒಂದು ಸ್ಥಾಪಿತ ಸಂಸ್ಥೆಯಾಗಿದ್ದು, ವ್ಯಕ್ತಿಗತ ಪ್ರಾಮುಖ್ಯತೆಯೊಂದಿಗೆ ಸಾಮಾಜಿಕ ಮಹತ್ವ ಹೊಂದಿದೆ. ಭಾರತೀಯ ಕುಟುಂಬದ ಉಗಮ ಮತ್ತು ಬೆಳವಣಿಗೆಗಳೊಂದಿಗೆ ಅದಕ್ಕೆ ಆಧಾರ ಶಿಲೆಯಾದ ವಿವಾಹವೂ ವಿಕಸಿತವಾಗಿ ಹಲವು ಹಂತಗಳನ್ನು ಹಾದು ಬಂದ ಇತಿಹಾಸ ರೋಚಕವಾಗಿದೆ. ವಿವಾಹ ದೇಶದ ಎಲ್ಲೆಡೆ ಪ್ರಚಲಿತವಿರುವ ಒಂದು ಸಂಸ್ಕಾರ ವಿಧಿ. "ಪ್ರಪಂಚದ ಹೆಚ್ಚಿನ ಸಮಾಜ ಅಥವಾ ಸಮುದಾಯಗಳಲ್ಲಿ ಒಂದಲ್ಲ ಒಂದು ರೀತಿಯ ವಿವಾಹ ಪದ್ಧತಿ ಇದೆ. ವಿವಾಹ ಪದ್ಧತಿಯಲ್ಲಿ ಹಾಗೂ ವಿವಾಹದ ನಿಯಮಗಳಲ್ಲಿ ಅನೇಕ ಬಗೆಯ ವೈವಿಧ್ಯಗಳಿವೆ" ಎಂದು ಡಾ. ಚಂದ್ರಶೇಖರ್ ಬಿ.ದಾಮ್ಲೆಯವರು ಅಭಿಪ್ರಾಯಪಟ್ಟಿದ್ದಾರೆ. ಇದರಂತೆ ಬೇಡರಲ್ಲಿ ವಿಶಿಷ್ಟ ರೀತಿಯ ವಿವಾಹಪದ್ಧತಿ ಜಾರಿಯಲ್ಲಿದೆ. ಸಾರ್ವತ್ರಿಕವಾಗಿ ಆದಿಯಲ್ಲಿ ಮದುವೆಗಳು ಇಂದಿನ ಮದುವೆಗಳಂತೆ ಪುರೋಹಿತರ ಮಂತ್ರಗಳೊಂದಿಗೆ ಅಗ್ನಿಸಾಕ್ಷಿಯಾಗಿ ನಾತಿಚರಾಮಿ ಎಂಬ ಪ್ರಮಾಣಗಳೊಂದಿಗೆ ನಡೆಯುತ್ತಿರಲಿಲ್ಲ. ಇದಕ್ಕೆ ಸಂಬಂಧಿಸಿದ ಅಭಿಪ್ರಾಯ ಆಚಾರ, ವಿಚಾರ ಹಂತ ಹಂತವಾಗಿ ಬದಲಾಗುತ್ತಾ ಬಂದವು. ಅಂದ ಮೇಲೆ ಬುಡಕಟ್ಟು ಜನರ ವಿವಾಹಗಳ ಮೇಲೆಯೂ ಸಹ ಇಂತಹ ಪರಿಣಾಮಗಳು ಸಾಮಾಜಿಕ ಬದಲಾವಣೆಗಳಿಂದಾಗಿವೆ. ಆಧುನೀಕರಣ, ನಗರೀಕರಣದ ಅಲೆಗೆ ಸಿಕ್ಕ ಇಂದಿನ ಜನರು ತಮ್ಮ ಜಾತಿ ಜನಾಂಗಗಳನ್ನು ಲೆಕ್ಕಿಸದೇ ಅನ್ಯ ಜಾತಿಯವರೊಂದಿಗೆ ವಿವಾಹವಾಗುವ ಕಾಲವಿದಾಗಿದೆ. ಅಂದು ಬಹಳಷ್ಟು ವಿವಾಹಗಳು ಹಿರಿಯರು ಒಪ್ಪಿದವರೊಂದಿಗೆ ಜರುಗುತ್ತಿದ್ದವು. ಆದರೆ ಇಂದು 'Marriage youth choice' ಆಗಿರಬೇಕು ಎಂದು ಕೆ.ಮಲ್ಲಣ್ಣ ಎಂಬ ವಕ್ತೃವಿನ ಅಭಿಪ್ರಾಯವಾಗಿದೆ.

ಅಧ್ಯಯನ ಕೈಗೊಳ್ಳಲಾಗಿರುವ ಕ್ಷೇತ್ರವ್ಯಾಪ್ತಿಯಲ್ಲಿ ಮ್ಯಾಸಬೇಡರು ಹಾಗೂ ಊರುಬೇಡರು

ಸಮಪ್ರಮಾಣದಲ್ಲಿ ಕಂಡುಬರುತ್ತಾರೆ. ಇವರ ಸಾಕಷ್ಟು ಆಚರಣಾ ವಿಧಿಗಳಲ್ಲಿ ಸಾಮ್ಯತೆ ಹೊಂದಿದ್ದರೂ ವಿವಾಹಕ್ಕೆ ಸಂಬಂಧಿಸಿದಂತೆ ಮಾತ್ರ ಇಲ್ಲಿ ಬಹಳ ಕಟ್ಟುನಿಟ್ಟಿನ ಕ್ರಮವಿದೆ. ಈ ಮೊದಲೇ ತಿಳಿದಿರುವಂತೆ ಚಿತ್ರದುರ್ಗ ಹಾಗೂ ಬಳ್ಳಾರಿ ಜಿಲ್ಲೆ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಬೇಡರಲ್ಲೇ ಮ್ಯಾಸಬೇಡರು ಹಾಗೂ ಊರುಬೇಡರು ಎಂಬ ಎರಡು ಪಂಗಡಗಳಿವೆ. ಇವೆರಡೂ ಒಂದೇ ಮೂಲದಿಂದ ಬಂದಿರುವುದು ನಮಗೆಲ್ಲ ತಿಳಿದಿರುವ ವಿಷಯವಾಗಿದೆ. ಆದರೆ ಕೇವಲ ಯಾವುದೋ ಒಂದು ಕ್ಷುಲ್ಲಕ ಕಾರಣಕ್ಕಾಗಿ ಇವರು ಬೇರೆಯಾಗಿದ್ದರು. ಈ ಪ್ರದೇಶದಲ್ಲಿ ಇಂತಹ ವ್ಯತ್ಯಾಸ ಬಹಳವಾಗಿ ಕಂಡುಬರುತ್ತದೆ. ಕೂಡ್ಲಿಯ ಬೇಡರಲ್ಲಿನ ಒಂದು ವಿಶೇಷತೆ ಎಂದರೆ ಇವರಲ್ಲಿ ಜರುಗುವ ಪ್ರತಿಯೊಂದು ಕಾರ್ಯಕ್ರಮ, ಜಾತ್ರೆ, ಉತ್ಸವ, ಹಬ್ಬಗಳಲ್ಲಿ ಭೇದವನ್ನು ಮರೆತು ಎರಡು ಪಂಗಡದವರು ಸೇರಿ ನಿರ್ವಹಿಸುತ್ತಾರೆ. ಆದರೆ ವಿವಾಹದ ಕೊಡುಕೊಳ್ಳುವ ವಿಚಾರದಲ್ಲಿ ಮಾತ್ರ ಇವರು ಒಂದಾಗುವುದು ಅಸಾಧ್ಯವಾಗಿದೆ. ಒಂದು ಕಾಲದಲ್ಲಿ ಪರಸ್ಪರ ಒಬ್ಬರ ಕಾರ್ಯಕ್ರಮಗಳಿಗೆ ಒಬ್ಬರು ಭಾಗವಹಿಸದೇ ಇರುವ ಪರಿಸ್ಥಿತಿ ಇದ್ದಿತು. ಕಾಲಕಳೆದಂತೆ ಹೊಸ ತಲೆಮಾರಿನ ಜನರು ಬೆಳೆದು ಬಂದಂತೆಲ್ಲ ಇಂತಹ ಆಚರಣೆಗಳು ನಶಿಸತೊಡಗಿದವು. ಮದುವೆ ಮೊದಲಾದ ಸಮಾರಂಭಗಳನ್ನು ಕೂಡಿ ಮಾಡುವ ಕಾಲ ಬರತೊಡಗಿತು. ಇಂದು ಯುವ ಸಮೂಹವು ಎರಡು ಪಂಗಡದಲ್ಲಿರುವ ಭಿನ್ನತೆ ಮರೆತು ಪರಸ್ಪರ ವಿವಾಹವಾಗುವ ಮನಸ್ಥಿತಿ ಹೊಂದಿದ್ದಾರೆ. ಇದಕ್ಕೆ ನಿದರ್ಶನವಾಗಿ ಹಲವಾರು ಪ್ರಕರಣಗಳು ಕಂಡುಬರುತ್ತವೆ. ಆದರೆ ಅವುಗಳಲ್ಲಿ ಶೇಕಡ ೮೦ ರಷ್ಟು ಪ್ರೇಮ ವಿವಾಹಗಳು ಎಂಬುದು ಸತ್ಯವಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯವನ್ನು ಮಾಡುವಾಗ ಕೆಲವು ವ್ಯಕ್ತಿಗಳನ್ನವಯಸ್ಸಿಗನುಗುಣವಾಗಿ ಸಂದರ್ಶಿಸಲಾಯಿತು. ಆಗ ೫೦-೭೦ ವರ್ಷದ ವ್ಯಕ್ತಿಗಳು ಮ್ಯಾಸಬೇಡ ಹಾಗೂ ಊರುಬೇಡರ ನಡುವಿನ ವಿವಾಹಕ್ಕೆ ಒಪ್ಪಿಗೆ ನೀಡದೇ ಇರುವ ಮನೋಧರ್ಮ ಹೊಂದಿದ್ದರೆ, ೩೦ - ೫೦ ವರ್ಷದ ವ್ಯಕ್ತಿಗಳು ಇಂತಹ ವಿವಾಹಗಳಾಗುವುದರಲ್ಲಿ ತಪ್ಪೇನಿಲ್ಲ ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಇನ್ನು ೧೮-೨೫ ವಯೋಮಾನದವರಲ್ಲಿ ಇಂತಹ ವಿವಾಹಗಳಿಗೆ ಸಂಪೂರ್ಣ ಒಪ್ಪಿಗೆ ಇದ್ದು ಈ ರೀತಿ ವಿವಾಹವಾಗುವವರಿಗೆ (ಮ್ಯಾಸಬೇಡರು ಹಾಗೂ ಊರುಬೇಡರು) ಪ್ರೋತ್ಸಾಹ ನೀಡುತ್ತಿದ್ದಾರೆ. ಇದು ನಮ್ಮ ಸಮುದಾಯದ ಒಗ್ಗಟ್ಟಿನ ಪ್ರತೀಕ ಎಂಬುದಾಗಿ ಅಭಿಪ್ರಾಯ ಸೂಚಿಸುತ್ತಾರೆ. ಇವುಗಳಿಗೆ ಸಂಬಂಧಿಸಿದಂತೆ ಇಂತಹ ಸುಮಾರು ೧೦- ೧೫ ಜೋಡಿಗಳು ಸಿಗುತ್ತಾರೆ. ಇನ್ನು ಕೆಲವು ಕುಟುಂಬಗಳಲ್ಲಿ ಒಪ್ಪಿಗೆ ನೀಡಿ ಗೊತ್ತಿದ್ದು ಗೊತ್ತಿಲ್ಲದ ಹಾಗೆ ವಿವಾಹ ನೆರವೇರಿಸಿರುವ ಪ್ರಸಂಗಗಳು ಇಲ್ಲಿವೆ. ಇವರೆಲ್ಲರ ಅಭಿಪ್ರಾಯಗಳನ್ನು ಕಲೆ ಹಾಕಲಾಗಿದೆ. ಇದು ಒಂದು ರೀತಿ ಆರೋಗ್ಯಕರವಾದ ಬೆಳವಣಿಗೆ ಎಂದೆನಿಸುತ್ತದೆ. ಇದಕ್ಕೆ ಮೂಲಕಾರಣ ಸಾಮಾಜಿಕ ಬದಲಾವಣೆ ಕೆಲವು ಸಾರಿ ಮ್ಯಾಸಬೇಡರ ವಿವಾಹ ಊರುಬೇಡರು ಹಾಗೂ ಊರುಬೇಡರ ವಿವಾಹ ಮ್ಯಾಸಬೇಡರು ನಿಂತು ನೆರವೇರಿಸುವ ದೃಶ್ಯಗಳು ಕಣ್ಣಿಗೆ ಕಾಣುತ್ತವೆ.

ಮದುವೆ ಪದ್ಧತಿಗಳಿಗೆ ಸಂಬಂಧಿಸಿದಂತೆ ಈ ಎರಡು ಉಪ ಪಂಗಡಗಳಲ್ಲಿ ಶೇಕಡ ೭೦ರಷ್ಟು ಆಚರಣೆಗಳು ಒಂದೇ ಬಗೆಯಾಗಿವೆ. ಕೇವಲ ಕೆಲವೇ ಕೆಲವು ಅಂಶಗಳಲ್ಲಿ ಮಾತ್ರ ಇವರಿಬ್ಬರಲ್ಲಿ ವ್ಯತ್ಯಾಸವಿರುವುದು ಕಂಡುಬರುತ್ತದೆ. ಇಂತಹ ಮದುವೆಗಳಿಂದಾಗಿ ಅದೆಷ್ಟೋ ಕುಟುಂಬಗಳು ಇಂದಿಗೂ ದ್ವೇಷಿಗಳಾಗಿದ್ದಾರೆ. ಇವುಗಳಾವುವೂ ಯುವ ಜನಾಂಗದ ಪ್ರೀತಿಯುಕ್ತ ಕಣ್ಣಿಗೆ ಗೋಚರವಾಗಲಾರವು. ಕೆಲವು

ಕುಟುಂಬಗಳು ತಮ್ಮ ಮಕ್ಕಳ ಮೇಲಿನ ಮಮತೆ, ವಾತ್ಸಲ್ಯದಿಂದ ಮೊದಲಿಗೆ ಇದಕ್ಕೆ ವಿರೋಧ ವ್ಯಕ್ತಪಡಿಸಿದರೂ ಕೆಲವು ದಿನಗಳ ನಂತರ ಅನ್ಯೋನ್ಯವಾಗಿರುವ ಘಟನೆಗಳೂ ಇಲ್ಲದಿಲ್ಲ. ಇದು ಒಂದು ಪ್ರಕಾರದ ಕಾಲಾನುಕ್ರಮದ ಪರಿವರ್ತನೆಯೇ ಸರಿ. ಕೆಲವು ಕಾಲೋನಿಗಳಲ್ಲಿ ಇಂತಹ ವಿವಾಹಗಳು ಹೋ ಮತ್ತು ಬಿರ್ ಹಾರ್ ಸಮೂಹದಲ್ಲಿ ಆಚರಣೆಯಲ್ಲಿರುವ 'ಬಲವಂತ ಮಾಘುಸ್ನಾನ' (Marriage by instrusion) ರೀತಿಯಲ್ಲಿ ಅಂದರೆ ಇಷ್ಟಪಡುವವನ ಮನೆ ಮುಂದೆ ಹೆಣ್ಣುಧರಣಿ ಕುಳಿತು ಅವನನ್ನೇ ವಿವಾಹವಾಗುವುದು ಹಾಗೂ 'ಪ್ರೇಮಿಯೊಡನೆ ಪಲಾಯನ ವಿವಾಹ' (Marriage by mutual consent and Elopment) ಗಳಂತಹ ಪ್ರಕರಣಗಳು ಜರುಗಿವೆ. ಇವೆರಡು ಉಪ ಪಂಗಡಗಳಲ್ಲಿ ವಿವಾಹಕ್ಕೆ ಸಂಬಂಧಿಸಿದಂತೆ ಯಾವ ಅಂಶಗಳಲ್ಲಿ ಭಿನ್ನತೆ ಹಾಗೂ ಸಾಮ್ಯತೆ ಇವೆ ಎಂದು ನೋಡುವುದಾದರೆ ಸಾಮ್ಯತೆಗಳೇ ಅಧಿಕವಾಗಿವೆ. ಈ ಹಿಂದೆ ಇವರ ವಿವಾಹಗಳು ತೀರಾ ಸರಳವಾಗಿದ್ದವು. ಆದರೆ ಅವರ ಆಚರಣೆಗಳಲ್ಲಿ ಯಾವುದೇ ರೀತಿಯ ರಿಯಾಯಿತಿಗಳಿರಲಿಲ್ಲ. ಇಂದು ಕೆಲವು ರಿಯಾಯ್ತಿ ಕಾಣುತ್ತಿದ್ದೇವೆ. ಮುಂದೆ ನಾವು ಮುಖ್ಯವಾಗಿ ಈ ಎರಡು ಪಂಗಡಗಳ ವೈವಾಹಿಕ ಆಚರಣೆಗಳಲ್ಲಿ ಎಂತಹ ಭಿನ್ನತೆಗಳಿವೆ ಎಂಬುದನ್ನು ತಿಳಿದುಕೊಳ್ಳೋಣ.

ವಿವಾಹವೆನ್ನುವುದು ಸಾಮಾಜಿಕವಾಗಿ ಅತ್ಯಂತ ಮುಖ್ಯವಾದದ್ದು ಎನ್ನುವ ಅಂಶವನ್ನು ಪ್ರತಿಯೊಬ್ಬರು ಒಪ್ಪಲೇಬೇಕಾದುದು. ''ಪ್ರಾಚೀನ ಜಗತ್ತಿನಲ್ಲಿ ಬಹುತೇಕ ಹೆಚ್ಚಿನ ಮದುವೆಗಳು ತಂದೆ - ತಾಯಿ ಅಥವಾ ಹಿರಿಯರ ಆದೇಶದ ಮೇರೆಗೆ ನಡೆಯುತ್ತಿದ್ದವು. ಕಳೆದ ಸುಮಾರು ೫೦ ವರ್ಷಗಳಿಂದೀಚೆಗೆ ಈ ವಿಷಯದಲ್ಲಿ ಮಹತ್ತರ ಬದಲಾವಣೆ ಕಂಡುಬರುತ್ತಿದೆ''[೧೧] ಎನ್ನುವ ಈ ವ್ಯಾಖ್ಯಾನ ಇಂದಿನ ದಿನಗಳಲ್ಲಿ ಅನ್ವಯಿಸುವಂತಾಗಿದೆ. ತಮ್ಮ ಪಂಗಡದ ಯುವಕ ಯುವತಿಯರನ್ನು ಮದುವೆ ಮಾಡಿಕೊಳ್ಳುವ ಪದ್ಧತಿ ಈ ಹಿಂದಿನಿಂದಲೂ ಬೆಳೆದುಬಂದಿದೆ. ಆದರೆ ಬದಲಾದ ಈ ಪರಿಸ್ಥಿತಿಗಳಲ್ಲಿ ಇಂದಿನ ಯುವಕ ಯುವತಿಯರು ತಮ್ಮ ಸಂಗಾತಿಗಳನ್ನು ತಾವೇ ಆಯ್ಕೆಮಾಡಿಕೊಳ್ಳುವಲ್ಲಿ ಮುಂದಾಗಿದ್ದಾರೆ. ಇದಕ್ಕೆ ಬುಡಕಟ್ಟು ಸಮುದಾಯವೂ ಹೊರತಾಗಿಲ್ಲ ಇಂತಹ ಹಲವಾರು ಪ್ರಕರಣಗಳು ಇಲ್ಲಿ ಜರುಗಿವೆ.

ಕೂಡ್ಲಿಗಿ ಪ್ರದೇಶದಲ್ಲಿ ಬೇಡರ ಎರಡು ಪಂಗಡದ ಜನರು ಹೆಚ್ಚಾಗಿ ಅದರಲ್ಲಿ ಸಮಾನವಾದ ಜನಸಂಖ್ಯೆಯಿಂದ ಕೂಡಿದ್ದಾರೆ. ''ಊರನಾಯಕರು ಈ ಜನಾಂಗ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿಯಲ್ಲಿ ತುಮಕೂರು ಜಿಲ್ಲೆಯ ಪೂರ್ವಭಾಗದ ತಾಲೂಕುಗಳಲ್ಲಿ ಹೆಚ್ಚಾಗಿ ಇದ್ದಾರೆ''[೧೨] ಎಂದು ಹೇಳಲಾಗಿದೆ. ಇವರು ಮೂಲತಃ ಒಂದೇ ಮೂಲದಿಂದ ಬಂದವರಾಗಿರುವುದರಿಂದ ಇವರ ಸಾಕಷ್ಟು ಆಚರಣೆಗಳು ಒಂದೇ ಆಗಿವೆ. ಆದರೆ ವಿವಾಹದಲ್ಲಿ ಮಾತ್ರ ಕೆಲವು ಅಂಶಗಳಲ್ಲಿ ಭಿನ್ನತೆಗಳಿವೆ. ಆದರೆ ಇಂದು ಅಂತಹ ಲಕ್ಷಣಗಳನ್ನು ಗುರುತಿಸುವುದು ಸ್ವಲ್ಪ ಕಷ್ಟವಾಗಿದೆ. ಏಕೆಂದರೆ ಸಾಕಷ್ಟು ವಿವಾಹಗಳು ಇಂದು ಕಲ್ಯಾಣಮಂಟಪ, ದೇವಸ್ಥಾನ ಇತ್ಯಾದಿ ಸ್ಥಳಗಳಲ್ಲಿ ನಡೆಯುವುದರಿಂದ ಇದು ಊರುಬೇಡರ ಮದುವೆ ಇದು ಮ್ಯಾಸಬೇಡರ ಮದುವೆ ಎಂದುತಿಳಿಯುವದು ಕಷ್ಟಕರವಾಗುತ್ತದೆ. ಇವರಲ್ಲಿ ವಧು ವರರ ಅನ್ವೇಷಣೆಯಿಂದ ಹಿಡಿದು ಮದುವೆ ಮುಕ್ತಾಯಗೊಳ್ಳುವವರೆಗೆ ಸಾಕಷ್ಟು ಆಚರಣೆಗಳು ಒಂದೇ ಆಗಿವೆ. ಇಲ್ಲಿ ನಾವು ಭಿನ್ನತೆಗಿಂತ ಹೆಚ್ಚಾಗಿ ಸಾಮ್ಯತೆಗಳನ್ನು ಕಾಣಬಹುದು. ಎರಡು ಪಂಗಡಗಳ ವಿವಾಹ ಸಂಪ್ರದಾಯದಲ್ಲಿರುವ ಭಿನ್ನತೆಗಳೆಂದರೆ

**ಮ್ಯಾಸಬೇಡರು**

ಇವರು ಮದುವೆ ಹೆಣ್ಣಿನ ಮನೆ ಮುಂದೆ ಮಾಡಿ ಅವಳನ್ನು ಮನೆಗೆ ಕರೆತರುತ್ತಾರೆ. ಮದುವೆ ದಿನದಂದು ಹೆಣ್ಣಿಗೆ ದಂಡೆ ಹಾಕಲಾಗುವುದಿಲ್ಲ. ಅದರಂತೆ ಗಂಡಿಗೆ ತಲೆಗೆ ಬಾಸಿಂಗ ಕಟ್ಟುವುದಿಲ್ಲ. ಮದುವೆಗೆ ಪುರೋಹಿತನಿರುವುದಿಲ್ಲ. ಮದುವೆಯಲ್ಲಿ ತಾಳಿಕಟ್ಟಲು ಇವರು ಹಸೆಕಟ್ಟೆ ಬಳಸುವುದಿಲ್ಲ. ಹಾಗೂ ಇವರಲ್ಲಿ ಹೆಚ್ಚಿನ ಆಚರಣೆಗಳಿರದೆ ಕೇವಲ ಊರಿನ ಹಿರಿಯ ಆದೇಶದ ಮೇರೆಗೆ ಜರುಗುವ ವಿವಾಹಕ್ರಮವಾಗಿದೆ. ಮ್ಯಾಸಬೇಡರು ವಿವಾಹದಲ್ಲಿ ಗಂಡಿಗೆ ರುಮಾಲು ಸುತ್ತಿರುತ್ತಾರೆ. ಮದುವೆ ಕಾರ್ಯಗಳನ್ನು ನೆರವೇರಿಸುವ ವ್ಯಕ್ತಿ ಕಡ್ಡಾಯವಾಗಿ ತಲೆಗೆ ರುಮಾಲು ಸುತ್ತಿಕೊಂಡಿರುತ್ತಾನೆ.

**ಊರುಬೇಡರು**

ಇವರು ಮನೆಮುಂದೆ ಚಪ್ಪರ ಹಾಕಿಸಿ ಗಂಡಿನ ಮನೆಮುಂದೆ ತಾಳಿ ಕಟ್ಟುವುದು, ಮದುವೆಗೆ ಪುರೋಹಿತನನ್ನು ಕರೆತರುತ್ತಾರೆ. ವಧು ವರರಿಗೆ ದಂಡೆ ಹಾಗೂ ಬಾಸಿಂಗ ಕಟ್ಟುವುದು ಇವರ ಆಚರಣೆಗಳಾಗಿವೆ. ವಧು ವರರು ಕೂಡಲು ಚಪ್ಪರದಲ್ಲಿ ಹಸೆಕಟ್ಟೆ ಕಟ್ಟಿರುತ್ತಾರೆ. ಅದರ ಮೇಲೆ ತಾಳಿಕಟ್ಟುವ ಪದ್ಧತಿ ಇವರಲ್ಲಿದೆ. ಇವರಲ್ಲಿ ಅತ್ತಿಗಂಭ, ಆಲಗಂಭ, ಅರಣಿ, ಸುರಿಗೆ ಸುತ್ತುವುದು ಇಂತಹ ಕೆಲವು ಆಚರಣೆಗಳು ಆಚರಿಸುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಡಾ.ಕೃಷ್ಣಮೂರ್ತಿ ಹನೂರುರವರು "ಊರನಾಯಕರು ತಮ್ಮಲ್ಲಿ ವಿವಾಹ ಏರ್ಪಟ್ಟರೆ ಮದುವೆ ಕೆಲವು ಆಚರಣೆಗಳಾದ ಅತ್ತಿಕಂಭ, ಆಲಗಂಭ, ಅರಣಿ, ಸುರಿಗೆ ಸುತ್ತುವುದು ಇವನ್ನೆಲ್ಲ ಆಚರಿಸುತ್ತಾರೆ. ಇವು ಊರನಾಯಕರಲ್ಲೇ ಅಲ್ಲದೆ ಊರ ಇತರ ಜಾತಿಗಳಲ್ಲೂ ಇರುತ್ತದೆ. ಆದರೆ ಮ್ಯಾಸರ ವಿವಾಹ ಸಂದರ್ಭದಲ್ಲಿ ಅತ್ತಿ, ಆಲ, ಅರಣಿ, ಸುರಿಗೆ ಇದು ಯಾವುದು ಇರುವುದಿಲ್ಲ."[೧೩]

ಇನ್ನು ಮೇಲಿನವುಗಳನ್ನು ಹೊರತುಪಡಿಸಿ ಉಳಿದಂತೆ ಎಲ್ಲ ಆಚರಣೆಗಳು ಒಂದೇ ಆಗಿವೆ. ಅವುಗಳೆಂದರೆ ಇಂದು ಮ್ಯಾಸರು ಸಹ ಮದುವೆಗೆ ಚಪ್ಪರ ಹಾಕಿಸುವ ಪದ್ಧತಿ ಇಲ್ಲಿದೆ. ಊರಿನಿಂದ ಬರುವ ಬೀಗರನ್ನು ಎದುರುಗೊಳ್ಳುವ ಸಂಪ್ರದಾಯ ಇವರಿಬ್ಬರಲ್ಲೂ ಇದೆ. ಉಳಿದಂತೆ ವಿವಾಹದಲ್ಲಿ ಊಟ ಅನುಸರಿಸುವ ಬಳಿ ಗೋತ್ರ ಮೊದಲಾದ ವಿಷಯಗಳಲ್ಲಿ ಸಾಮ್ಯತೆ ಹೊಂದಿದ್ದಾರೆ.

**ತೆರಕೊಡುವ ಪದ್ಧತಿ**

ಬೇಡರಲ್ಲಿ ತೆರಕೊಡುವ ಪದ್ಧತಿ ಆಚರಣೆಯಲ್ಲಿದೆ. ಇದು ಎರಡು ಪಂಗಡಗಳಲ್ಲಿ ಕಂಡುಬರುತ್ತದೆ. 'ತೆರವು' ಎಂದರೆ 'ಕನ್ಯಾಶುಲ್ಕ' ಹಿಂದೆ ಒಬ್ಬ ಹೆಣ್ಣನ್ನು ಮದುವೆಯಾಗಬೇಕಾದರೆ ಅವಳಿಗೆ ತೆರವು ಕೊಡಬೇಕಾಗಿತ್ತು ಅದು ಧಾನ್ಯದರೂಪದಲ್ಲಿ ಪ್ರಚಲಿತವಿತ್ತು. ಇದನ್ನು ವೀಳ್ಯಶಾಸ್ತ್ರ ಅಂದರೆ ನಿಶ್ಚಿತಾರ್ಥ ದಿನದಂದು ನಿಶ್ಚಯ ಮಾಡಲಾಗುತ್ತಿತ್ತು. ಈ ಪದ್ಧತಿ ಈಗ ಕೇವಲ ನಾಮ ಮಾತ್ರಕ್ಕೆ ಇದೆ. ಇಂದು ಯಾರೂ ಸಹ ತೆರವು ಕೊಡುವುದಿಲ್ಲ ಬದಲಿಗೆ ವರದಕ್ಷಿಣೆ ಕೊಡುವ ರೂಢಿ ಬೆಳೆದಿದೆ. ಹಿಂದೆ ಹೆಣ್ಣಿಗೆ ತೆರವು ರೂಪದಲ್ಲಿ ಧಾನ್ಯ, ಕೆಲವರು ಹಣದ ರೂಪದಲ್ಲಿ ನೀಡುತ್ತಿದ್ದರು. ಅದಕ್ಕೆ ಅಂದು ಹೆಣ್ಣಿನ ಸಂಖ್ಯೆ ಕಡಿಮೆ ಇದ್ದದ್ದೂ ಕಾರಣವಿರಬಹುದು. ಆದರೆ ಇಂದು ಇವರ ಸಂಖ್ಯೆಯಲ್ಲಿ ಆದ ಬದಲಾವಣೆಯಿಂದಾಗಿ ಹಾಗೂ ಆಧುನೀಕರಣದಿಂದಾಗಿ ತೆರವು ಪದ್ಧತಿ ಮಾಯವಾಗಿದೆ. ಇಂದು ನಿಶ್ಚಿತಾರ್ಥ ದಿನದಂದು ಹಿರಿಯರು ಸೇರಿ

'ತೆರ' ವಿಷಯದ ಬಗ್ಗೆ ಕೇವಲ ಮಾತನಾಡುತ್ತಾರೆಯೇ ಹೊರತು ಅದನ್ನು ನೆರವೇರಿಸಲಾಗುವುದಿಲ್ಲ. ಬದಲಾಗಿ ವರನಿಗೆ ಕೊಡುವ ವರದಕ್ಷಿಣೆ ಬಗ್ಗೆ ತೀರ್ಮಾನಿಸುತ್ತಾರೆ. ಊರು, ಕೇರಿ, ಪಟ್ಟಣಗಳ ಜೀವನ ಕ್ರಮದ ಪ್ರಭಾವ ಬೇಡನಾಯಕರ ಮೇಲೆ ಆಗುತ್ತಿರುವುದರಿಂದ ಅವರ ಅನೇಕ ಆಚರಣೆಗಳು ಕೈಬಿಡಲ್ಪಡುತ್ತಿವೆ ಎಂಬ ಹನೂರು ಅವರ ಅಭಿಪ್ರಾಯ ಇಂದಿನ ದಿನಗಳಲ್ಲಿ ಸೂಕ್ತವಾಗಿದೆ.

**ವರದಕ್ಷಿಣೆ**

ಇಲ್ಲಿನ ಬೇಡರು ಸಾಮಾನ್ಯವಾಗಿ ವರದಕ್ಷಿಣೆ ಕೊಡುಕೊಳ್ಳುವ ಪದ್ಧತಿ ಅನುಸರಿಸುತ್ತಾರೆ. ಒಂದು ಕಾಲದಲ್ಲಿ ಹೆಣ್ಣಿಗೆ ಶುಲ್ಕ ನೀಡಿ ಮನೆಗೆ ಕರೆತರಬೇಕಿದ್ದ ಇವರ ಸಂಪ್ರದಾಯವು ಬದಲಾಗಿ ಗಂಡಿಗೆ ಶುಲ್ಕ ನೀಡಿ ಜೊತೆಗೆ ಹೆಣ್ಣನ್ನು ನೀಡಿ ಮದುವೆ ಮಾಡಿಕೊಡುವ ಪರಿಸ್ಥಿತಿಗಳು ಇವೆ. ಇಂದು ಈ ವರದಕ್ಷಿಣೆ ಒಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದೆ. ಆದರೆ ಇವರು ಕೊಡುವ ಹಾಗೂ ತೆಗೆದುಕೊಳ್ಳುವ ವರದಕ್ಷಿಣೆ ಬಗ್ಗೆ ಯಾರಿಗೂ ತಿಳಿಯದಂತೆ ನೋಡಿಕೊಳ್ಳುತ್ತಾರೆ. ಕೆಲವು ವರ್ಷಗಳ ಹಿಂದೆ ಇವರಿಗೆ ಇದರ ಅರಿವೇ ಇರಲಿಲ್ಲ ಇತರೆ ಸಮುದಾಯಗಳ ಪ್ರಭಾವದಿಂದ ಇವರಲ್ಲಿ ವರದಕ್ಷಿಣೆ ಪದ್ಧತಿ ಕಾಲಿರಿಸಿದೆ. ಈ ಪದ್ಧತಿ ನಾವು ಮ್ಯಾಸಬೇಡರು ಹಾಗೂ ಊರುಬೇಡರಲ್ಲಿಯೂ ಕಾಣಬಹುದಾಗಿದೆ. ಅಂದು ಮದುವೆಗಳನ್ನು ಮನೆಮುಂದೆಯೇ ಮಾಡಬೇಕು ಎಂಬ ನಂಬಿಕೆ ಈಗ ಕಡಿಮೆಯಾಗಿ ಛತ್ರ, ಕಲ್ಯಾಣಮಂಟಪ, ದೇವಸ್ಥಾನಗಳ ಬಳಿ ಇವರ ವಿವಾಹಗಳು ಜರುಗುತ್ತಿವೆ. ವರದಕ್ಷಿಣೆ ನಮ್ಮ ಸಮಾಜದಲ್ಲಿ ತಲೆದೋರಿರುವ ಒಂದು ಸಮಸ್ಯೆಯಾಗಿದೆ. ಕೊಡುವವರು ಹೆಚ್ಚಾಗಿದ್ದಾರೆ. ಒಂದು ವೇಳೆ ಒಬ್ಬ ಒಳ್ಳೆಯ ಚಾರಿತ್ರ್ಯವುಳ್ಳ ವ್ಯಕ್ತಿ ವರದಕ್ಷಿಣೆ ಪಡೆಯಲು ನಿರಾಕರಿಸಿದರೆ ಅವನ ಚಾರಿತ್ರ್ಯ ಹಾಗೂ ನಡತೆ ಬಗ್ಗೆ ಅನುಮಾನ ವ್ಯಕ್ತಪಡಿಸುವ ಕಾಲ ಇದಾಗಿದೆ. ವರದಕ್ಷಿಣೆಗೆ ಬಲಿಯಾದ ಹೆಣ್ಣಿನ ಎಷ್ಟೋ ಪ್ರಕರಣಗಳ ಬಗ್ಗೆ ದಿನಪತ್ರಿಕೆಗಳಲ್ಲಿ ಓದುವ ದೃಶ್ಯ ಸಾಮಾನ್ಯವಾಗಿದೆ. ಇದು ಬುಡಕಟ್ಟು ಸಮಾಜಗಳಲ್ಲಿಯೂ ಇದೆ. ವರದಕ್ಷಿಣೆ ಪದ್ಧತಿಗೆ ವಿರುದ್ಧವಾಗಿ ೧೯೬೧ರಲ್ಲಿ ವರದಕ್ಷಿಣೆ ನಿಷೇಧ ಕಾಯ್ದೆ ಜಾರಿಗೆ ಬಂದರೂ ಇದರ ಪರಿಣಾಮ ತೀವ್ರವಾಗಿಲ್ಲ. ಎಷ್ಟೋ ಜನ ವಿದ್ಯಾವಂತರೂ ವರದಕ್ಷಿಣೆ ಪಡೆಯುತ್ತಿದ್ದಾರೆ. ಇದನ್ನು ವಿರೋಧಿಸಲು ಯಾರೊಬ್ಬರೂ ಮುಂದೆಬಾರದ ಪರಿಸ್ಥಿತಿ ಇದೆ.

**ಮ್ಯಾಸಬೇಡರು ಹಾಗು ಊರುಬೇಡರ ವಿವಾಹಗಳು**

ಬೇಡರು ವಿವಾಹಕ್ಕೆ ಸಂಬಂಧಿಸಿದಂತೆ ಕಟ್ಟುನಿಟ್ಟಿನ ಕ್ರಮಗಳನ್ನು ಅನುಸರಿಸುತ್ತಿದ್ದರು. ಅಂದರೆ ಇವರು ರಕ್ತಪರಿಶುದ್ಧತೆಗೆ ಒಲವು ನೀಡಿದ್ದರು. ಅದರಂತೆ ಕೂಡ್ಲಿಗಿ ವ್ಯಾಪ್ತಿಯಲ್ಲಿನ ಬೇಡರು ವಿವಾಹಕ್ಕೆ ಹೆಚ್ಚು ಆದ್ಯತೆ ನೀಡುತ್ತಿದ್ದರು. ಈ ಪಟ್ಟಣದಲ್ಲಿ ಈ ಎರಡು ಪಂಗಡಗಳು ಸಮನಾಗಿ ಹಂಚಿದ್ದರೂ ಇವರ ಸಾಕಷ್ಟು ಆಚರಣೆ ಹಾಗೂ ಜೀವನಕ್ರಮಗಳು ಒಂದೇ ಆಗಿದ್ದರೂ ಇವರಲ್ಲಿ ಕೊಡುಕೊಳ್ಳುವ ಕ್ರಿಯೆ ಮಾತ್ರ ಇರಲಿಲ್ಲ. ಮೊದಲಿಗೆ ಪರಸ್ಪರ ಒಬ್ಬರ ವಿವಾಹಕ್ಕೆ ಮತ್ತೊಬ್ಬರು ಪ್ರವೇಶಿಸುತ್ತಿರಲಿಲ್ಲ. ಆದರೆ ಕಾಲ ಬದಲಾದಂತೆ ಇವರಲ್ಲಿ ಪ್ರಜ್ಞೆ ಮೂಡಿದಂತೆಲ್ಲ ಪರಸ್ಪರ ಸಲಹೆ ಸೂಚನೆಗಳನ್ನು ನೀಡುವ ಹಾಗೂ ಅವುಗಳನ್ನು ಒಪ್ಪಿಕೊಳ್ಳುವಲ್ಲಿ ಮುಂದಾದರು. ಇನ್ನು ಕೆಲವು ಕಾಲ ಕಳೆದಂತೆ ನವ ತಲೆಮಾರಿನ ಜನರು ಅಂದರೆ ಈಗಿನ

ಯುವಕ ಯುವತಿಯರು ಪರಸ್ಪರ ವಿವಾಹವಾಗುವ ಮನೋಧರ್ಮ ಹೊಂದಿರುವುದು ಇಲ್ಲಿನ ಒಂದು ರೀತಿಯ ಬದಲಾವಣೆಯೇ ಸರಿ. ಕೇವಲ ಕೆಲವು ಅಂಶಗಳಲ್ಲಿ ಭಿನ್ನತೆ ಇದ್ದರೂ ತಂದೆ ತಾಯಿಗಳು ಇವರ ವಿವಾಹ ನೆರವೇರಿಸಲು ಹಿಂಜರಿಯುತ್ತಾರೆ. ಇನ್ನೂ ಹಳೆ ತಲೆಮಾರಿನ ಜನರಂತೂ ಸುತಾರಾಂ ಒಪ್ಪುವುದೇ ಇಲ್ಲ.

ಇಂತಹ ಪರಿಸ್ಥಿತಿಗಳ ನಡುವೆಯೂ ಕೂಡ್ಲಿಗಿಯಲ್ಲಿ ಸುಮಾರು ೧೦ - ೧೫ ಜೋಡಿಗಳು ಈ ರೀತಿ ವಿವಾಹವಾಗಿರುವುದನ್ನು ಕಾಣುತ್ತೇವೆ. ಆದರೆ ಇವೆಲ್ಲವುಗಳು ಪ್ರೇಮವಿವಾಹಗಳೇ ಆಗಿವೆ. ಕೆಲವು ಕುಟುಂಬದಲ್ಲಿ ಇಂತಹ ವಿವಾಹಗಳನ್ನು ಒಪ್ಪಿ ಮಾಡಿದ್ದಾರೆ. ಆದರೆ ಅವರು ಅದನ್ನು ಗುಟ್ಟಾಗಿಟ್ಟಿದ್ದಾರೆ. ಇಂತಹ ವಿವಾಹಗಳನ್ನು ಮಾಡದೇ ಇರುವುದಕ್ಕೆ ಇವರಲ್ಲಿ ಕೆಲವು ನಂಬಿಕೆಗಳಿವೆ. ಅವುಗಳೆಂದರೆ ಈ ರೀತಿ ವಿವಾಹವಾದವರ ಮಕ್ಕಳನ್ನು ಮುಂದೆ ಯಾರೂ ಕೂಡ ಮದುವೆಯಾಗಲು ಮುಂದೆ ಬರುವುದಿಲ್ಲ. ಜನರು ಶುಭಕಾರ್ಯಗಳಿಗೆ ಕರೆಯುವುದಿಲ್ಲ ಎಂಬಿತ್ಯಾದಿ ನಂಬಿಕೆಗಳು ಇವರಲ್ಲಿವೆ. ಇಂತಹ ನಂಬಿಕೆಗಳಾವುವು ಯುವಕ, ಯುವತಿಯರ ಪ್ರೀತಿಯುಕ್ತ ಕಣ್ಣಿಗೆ ಗೋಚರಿಸುವುದಿಲ್ಲ ಆದಕಾರಣ ಇಂದಿನ ಜನರು ಇಂತಹ ವಿವಾಹಗಳಿಗೆ ಒಪ್ಪಿಗೆ ನೀಡುವ ಮನೋಭಾವ ಹೊಂದಿದ್ದಾರೆ. ಇಂದಿಗೂ ಸಹ ಕೆಲವು ಜನ ಯುವಕ ಯುವತಿಯರು (ಮ್ಯಾಸಬೇಡರು ಹಾಗೂ ಊರುಬೇಡರ ಪಂಗಡದವರು) ಪರಸ್ಪರ ಮದುವೆಯಾಗಲು ಕಾತುರದಲ್ಲಿದ್ದಾರೆ. ಇದು ಒಂದು ರೀತಿಯ ಬದಲಾವಣೆ ಜೊತೆಗೆ ಈ ಎರಡು ಪಂಗಡದವರು ಪರಸ್ಪರ ಸಂಕರಗೊಳ್ಳುವಲ್ಲಿ ಸಹಕಾರಿಯಾಗಿದೆ. ಈ ವಿಧದಲ್ಲಿ ಮದುವೆ ಮಾಡಿಕೊಂಡ ದಂಪತಿಗಳನ್ನು ಸಂದರ್ಶಿಸಿದಾಗ ಅವರಿಂದ ಬಂದ ಅಭಿಪ್ರಾಯಗಳು ಈ ರೀತಿಯಾಗಿವೆ.

ಮ್ಯಾಸಬೇಡ ಹಾಗೂ ಊರುಬೇಡರ ಪಂಗಡದವರು ಪರಸ್ಪರ ವಿವಾಹವಾದ ದಂಪತಿಗಳನ್ನು ಸಂದರ್ಶಿಸಿದಾಗ ಅವರಿಂದ ಬಂದ ಅಭಿಪ್ರಾಯಗಳು ಬಹಳ ಕುತೂಹಲಕಾರಿಯಾಗಿವೆ. ಈ ಊರಿನಲ್ಲಿರುವ ಸುಮಾರು ಜೋಡಿಗಳ ಹೆಸರು ಹಾಗೂ ವಿವರಗಳನ್ನು ಮುಂದಿನ ಪಟ್ಟಿಯಲ್ಲಿ ಕಾಣಬಹುದು.

ಕೂಡ್ಲಿಗಿ ಪಟ್ಟಣದಲ್ಲಿ ಸುಮಾರು ೨೦-೨೫ ವರ್ಷಗಳ ಹಿಂದೆ ಮ್ಯಾಸಬೇಡ ಹಾಗೂ ಊರುಬೇಡರಲ್ಲಿ ವಿವಾಹ ನೆರವೇರುವುದು ತುಂಬಾ ಸಾಹಸದ ಕೆಲಸ ಇಂತಹ ಪರಿಸ್ಥಿತಿಗಳಲ್ಲಿ ಮೊದಲಿಗೆ ವಿವಾಹವಾದವರು **ಶ್ರೀ ಹನುಮಂತಪ್ಪ ಹಾಗೂ ಸಾವಿತ್ರಮ್ಮ** ಎಂಬುವರು ಇವರ ಅಭಿಪ್ರಾಯ ಈ ರೀತಿ ಇದೆ. ನಾವು ಮದುವೆಯಾಗಿ ಸುಮಾರು ವರ್ಷಗಳಾದವು ಅಂದು ಈ ಊರಿನಲ್ಲಿ ನಮ್ಮ ಎರಡು ಪಂಗಡಗಳಲ್ಲಿ ಕೊಡುಕೊಳ್ಳುವ ವಿಚಾರವೇ ಇರಲಿಲ್ಲ ಅಂತಹ ಪರಿಸ್ಥಿತಿಯಲ್ಲಿ ನಾವು ಮದುವೆ ಆಗಿದ್ದು ತುಂಬಾ ದುಸ್ಸಾಹಸವಾಗಿತ್ತು. ನಾವು ಮದುವೆಯಾಗಿ ಕೆಲವು ದಿನಗಳವರೆಗೆ ನಮ್ಮ ಸುತ್ತಮುತ್ತಲಿನ ಜನರಿಂದ ಸಾಕಷ್ಟು ನಿಂದನೆಗಳನ್ನು ಅನುಭವಿಸಿ ಮಾನಸಿಕವಾಗಿ ತುಂಬಾ ವೇದನೆಗಳನ್ನು ಅನುಭವಿಸಿದ್ದೇವು ಎಲ್ಲರು ನಮ್ಮನ್ನು ಒಂದು ರೀತಿಯಲ್ಲಿ ಅಂದರೆ ಒಂದು ರೀತಿ ಕೀಳರಿಮೆ ಭಾವನೆಯಿಂದ ಕಾಣುತ್ತಿದ್ದರು ನಮಗೂ ಸಹ ಭಯ ಮುಂದೆ ನಮ್ಮ ಗತಿ ಏನು ನಮ್ಮ ಮಕ್ಕಳ ಗತಿ ಹೇಗೆ ಎಂಬುದನ್ನು ವಿಚಾರಮಾಡುತ್ತಿದ್ದೆವು. ಕೆಲವು ಜನರು ಅವರ ಮನೆಗಳಲ್ಲಿ ಆಗುವ ಶುಭಕಾರ್ಯಗಳಿಗೆ ನಮ್ಮನ್ನು ಕರೆಯುತ್ತಿರಲಿಲ್ಲ. ನಾವು ಏನೋ ಒಂದು ದೊಡ್ಡ ತಪ್ಪು ಮಾಡಿರುವೆವೆಂಬ ಭಾವನೆ ಮೂಡುವ ವಾತಾವರಣ ಇತ್ತು ಕಾಲಕಳೆದಂತೆ ನಮಗೂ ಕೂಡ ಸಮಾಜದಲ್ಲಿ

ಸ್ಥಾನ ದೊರಕಿತು ಎಂದು ಹೇಳಿಕೊಂಡಿದ್ದಾರೆ. ಅದೇ ರೀತಿ ನಮ್ಮ ಕಾಲದಲ್ಲಿದ್ದ ಬಿಗುವಿನ ವಾತಾವರಣ ಇಂದು ಇಲ್ಲ ಎಂದಿದ್ದಾರೆ.

ನಂತರ ಮತ್ತೆ ಕೆಲವು ದಂಪತಿಗಳು ತಮ್ಮದೇ ಆದ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅವರಲ್ಲಿ ಕೂಡ್ಲಿಗಿಯ 'ಶ್ರೀ ರಾಮಪ್ಪ ಹಾಗೂ ಭಾಗ್ಯಮ್ಮ' ಎಂಬುವರು ತಮ್ಮ ಅನಿಸಿಕೆಗಳನ್ನು ಈ ಕೆಳಗಿನಂತೆ ತಿಳಿಸಿದ್ದಾರೆ. ನಾವು ಮದುವೆಯಾಗಿ ಸುಮಾರು ೧೦-೧೫ ವರ್ಷಗಳಾದವು ಅಂದಿನ ದಿನಗಳಲ್ಲಿ ಇನ್ನು ಸಹ ಕಟ್ಟುನಿಟ್ಟಿನ ಪರಿಸ್ಥಿತಿ ಇತ್ತು. ಆದರೂ ನಾವು ವಿವಾಹವಾದೆವು ಮದುವೆಯಾಗಿ ಎರಡು ಮೂರು ವರ್ಷಗಳವರೆಗೆ ನಾವು ಹೆದರಿಕೆಯ ಜೀವನವನ್ನು ಸಾಗಿಸಿದೆವು. ಎರಡು ಮನೆಗಳಲ್ಲೂ ನಮಗೆ ನೆಲೆ ಸಿಗದಂತೆ ಆಯಿತು. ಆದರೂ ಹೆದರದೆ ಜೀವನ ಸಾಗಿಸಿದೆವು. ಕೆಲವು ದಿನಗಳವರೆಗೆ ನಮ್ಮ ತಂದೆ ತಾಯಿ ಬಂಧು ಬಳಗದವರೆಲ್ಲರೂ ದೂರವಾದರು ಎಲ್ಲಿ ಹೋದರೂ ಕೇವಲ ನಿಂದನೆಗಳು ಕೆಲವು ದಿನಗಳವರೆಗೆ ಮನೆಯವರ ಹಾಗೂ ಇತರರ ಕಣ್ಮರೆಗೆ ಇರುವುದೇ ಲೇಸೆಂದು ಭಾವಿಸಿದ್ದೆವು. ಈ ರೀತಿ ವಿವಾಹವಾದರೆ ಎಂತಹ ಕಷ್ಟ ಎಂಬುದನ್ನು ನಾವು ಮರೆಯುವ ಹಾಗಿಲ್ಲ. ಇಂದು ಪರಿಸ್ಥಿತಿ ಬದಲಾಗಿದೆ. ನಮ್ಮಂತೆ ವಿವಾಹವಾದ ಎಷ್ಟೋ ಜನ ಇಂದು ಇದ್ದಾರೆ. ಅವರೆಲ್ಲರೂ ನಮ್ಮಂತೆ ಕಷ್ಟಪಟ್ಟಿಲ್ಲ ಎಂಬುದಾಗಿ ಹೇಳಿಕೆ ನೀಡಿದ್ದಾರೆ. ಇಂದು ನಾವು ಆರ್ಥಿಕವಾಗಿ ಮನೆ ಕಡೆ ಎಲ್ಲ ರೀತಿಯಲ್ಲೂ ಚೆನ್ನಾಗಿದ್ದೇವೆ ಒಂದು ಕಾಲದಲ್ಲಿ ತೆಗಳುತ್ತಿದ್ದ ಜನರು ಇಂದು ಅವರೇ ನಮ್ಮನ್ನು ತಮ್ಮ ಮನೆಗಳಲ್ಲಿ ಆಗುವ ಪ್ರತಿಯೊಂದು ಶುಭ ಕಾರ್ಯಗಳಿಗೂ ಕರೆದುಕೊಂಡು ಹೋಗುತ್ತಾರೆ. ಎಲ್ಲರಂತೆ ನಮಗೂ ಇಂದು ಅವಕಾಶಗಳಿವೆ. ನಮ್ಮಿಬ್ಬರ ಮನೆಯವರೆಲ್ಲರೂ ಈಗ ಸಂತೋಷದಿಂದ ಇದ್ದಾರೆ ಅವರ ಮನೆಗೆ ನಾವು ನಮ್ಮ ಮನೆಗೆ ಅವರು ಬರುವ ಕಾಲವಾಗಿ ಬದಲಾಗಿದೆ. ಒಂದು ಕಾಲದಲ್ಲಿ ಯಾರು ನಮ್ಮನ್ನು ತಿರಸ್ಕರಿಸಿದ್ದರೋ ಅವರೇ ನಮ್ಮನ್ನು ಈಗ ಒಪ್ಪಿಕೊಂಡು ಮನೆಗಳಲ್ಲಿ ಜರುಗಿಸುವ ಕಾರ್ಯಗಳಿಗೆ ನಮ್ಮ ಸಲಹೆಗಳನ್ನು ಕೇಳುವ ಹಾಗೂ ಕೆಲವು ರೀತಿಯ ಸಲಹೆಗಳನ್ನು ನೀಡುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಇಂದಿನ ದಿನಗಳಲ್ಲಿ ಈ ರೀತಿ ವಿವಾಹಗಳಿಗೆ ಅಷ್ಟೇನು ಅಡ್ಡಿ ಆತಂಕಗಳು ಬರಲಾರವು ಎಂಬುದಾಗಿ ವಿವರಿಸಿದ್ದಾರೆ.

ಕೂಡ್ಲಿಗಿ ೬ನೇ ವಾರ್ಡಿನಲ್ಲಿರುವ ಒಂದು ಜೋಡಿಗಳು ವಿವಾಹದ ಒಂದು ಕುತೂಹಲಕಾರಿ ಘಟನೆಯೇ ಜರುಗಿದೆ. ಅದೇನೆಂದರೆ 'ಶ್ರೀ ಕೃಷ್ಣಪ್ಪ ಹಾಗೂ ಸೊಲ್ಲಮ್ಮ' ಎಂಬ ದಂಪತಿಗಳು ವಿವಾಹವಾದದ್ದು ಒಂದು ವಿಶೇಷವಾದ ಘಟನೆಯಿಂದ ಅವರನ್ನು ಸಂದರ್ಶಿಸಿದಾಗ ಅವರಿಂದ ಬಂದ ಅನಿಸಿಕೆ ಹಾಗೂ ಕತೆ ಈ ರೀತಿ ಇದೆ.

ಇವರಿಬ್ಬರು ಒಬ್ಬರನ್ನೊಬ್ಬರು ಇಷ್ಟಪಟ್ಟು ಮದುವೆ ಆದವರು. ವಿವಾಹವಾಗುವುದಕ್ಕಿಂತ ಮುಂಚೆ ಇವರು ಅನುಭವಿಸಿದ ಅನುಭವ ಮರೆಯುವ ಹಾಗಿಲ್ಲ. ಇವರಿಬ್ಬರೂ ಕೆಲವೇ ದಿನಗಳಲ್ಲಿ ಮದುವೆ ಆಗುವ ವಿಷಯ ಇವರಿಬ್ಬರ ಮನೆಯಲ್ಲೂ ತಿಳಿಯಿತು ಆದರೆ ವಿವಾಹ ನೆರವೇರಿಸಲು ಆಗದ ಮಾತಾಗಿತ್ತು ಏಕೆಂದರೆ ಇವರು ಮ್ಯಾಸಬೇಡ ಹಾಗೂ ಊರುಬೇಡರ ಪಂಗಡಕ್ಕೆ ಸೇರಿದವರು ಇದನ್ನರಿತ ಕೃಷ್ಣರವರ ಮನೆಯಲ್ಲಿ ಅವನ ತಂದೆ ತಾಯಿಗಳು ಅವನಿಗೆ ಬೈದು ಬುದ್ಧಿ ಹೇಳಿ ಬೇರೆ ಕಡೆ ಮದುವೆ ಮಾಡುವ ಕಾಯಕಕ್ಕೆ ಕೈಹಾಕಿದರು.

ಇದನ್ನು ತಿಳಿದ ಹುಡುಗಿ ನನಗೆ ಅನ್ಯಾಯವಾಗುತ್ತಿದೆ ಎಂದು ತಿಳಿದು ಹುಡುಗನ ಮನೆ ಮುಂದೆ ಒಂದು ದಿನಗಳವರೆಗೆ ಧರಣಿ ಸತ್ಯಾಗ್ರಹ ಮಾಡುವಂತೆ, ಅವರ ಮನೆ ಮುಂದೆ ಕುಳಿತು ನಮ್ಮಿಬ್ಬರ ವಿವಾಹವನ್ನು ಜರುಗಿಸದೇ ಹೋದಲ್ಲಿ ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎಂಬ ಬೆದರಿಕೆ ಹಾಕಿದಳು ಅವಳ ಜೊತೆಗೆ ಆತ್ಮಹತ್ಯೆ ಮಾಡಿಕೊಳ್ಳುವ ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡಿದ್ದಳು. ಇದಾವುದಕ್ಕೂ ಮಣಿಯದೇ ಇದ್ದ ಸಂದರ್ಭದಲ್ಲಿ ಪೋಲೀಸರು ಬಂದು ಹುಡುಗನನ್ನು ಬಂದಿಸಿದರು ಇದನ್ನು ಸಹಿಸಲಾರದ ತಂದೆ ತಾಯಿಯವರು ಇದೇ ವಾರ್ಡಿನಲ್ಲಿರುವ ವಾಲ್ಮೀಕಿ ಯುವಕ ಸಂಘದ ನೆರವು ಪಡೆದು ಅವನನ್ನು ಬಿಡಿಸಿಕೊಂಡು ಬಂದು ಅಂದೇ ಪೋಲೀಸ್ ಕಲ್ಯಾಣ ಕೇಂದ್ರದಲ್ಲಿ ವಿವಾಹ ನೆರವೇರಿಸಿದರು. ಒಂದು ದಿನ ಅವಳು ನಮ್ಮ ಮನೆಗೆ ಸೊಸೆಯಾಗಿ ಸ್ವೀಕರಿಸಿಲು ನಿರಾಕರಿಸಿದ್ದ ತಂದೆ ತಾಯಿಗಳು ಅವರ ಸುಖಮಯವಾದ ಜೀವನ ಕಂಡು ಸಂತೋಷದಿಂದ ಇದ್ದಾರೆ. ಇವೆರಡು ಕುಟುಂಬಗಳು ಒಂದಾಗಲು ಇವರ ಮನೆಗೆ ಒಂದು ಮಗು ಬರಬೇಕಾದ ಪರಿಸ್ಥಿತಿ ಬಂದಿತು. ಅಂದರೆ ಇವರ ವಿವಾಹದಿಂದ ಬೇರೆಯಾಗಿದ್ದ ಇವರ ಬಂಧುತ್ವವು ಇವರ ಮಗುವಿನ ನಾಮಕರಣದ ದಿನದಂದು ಪುನಃ ಬೆಸೆದುಕೊಂಡಿತು ಇದು ಇವರ ಕಥೆಯಾಯಿತು. ಇದರಂತೆ ಇಲ್ಲಿ ಅನೇಕ ಪ್ರಕರಣಗಳು ಜರುಗಿವೆ. ಇಷ್ಟಾದರೂ ಕೂಡ ಇಲ್ಲಿನ ಈ ಎರಡು ಪಂಗಡದವರು ಪರಸ್ಪರ ಒಪ್ಪಿಗೆ ನೀಡಿ ವಿವಾಹ ನೆರವೇರಿಸಲು ಯಾರು ಸಹ ಮುಂದೆ ಬರುತ್ತಿಲ್ಲ. ಹಾಗೆಂದು ಯುವಕರು ಇಂತಹ ಮದುವೆಗಳನ್ನು ಆಗುವುದು ಬಿಡಲಾರರು.

ಇನ್ನುಳಿದಂತೆ ಇರುವ ನವ ವಿವಾಹಿತರು ಅಂದಿನ ದಿನಗಳಲ್ಲಿ ಅನುಭವಿಸುತ್ತಿದ್ದಂತಹ ಕಷ್ಟಗಳನ್ನು ಇಂದು ಅನುಭವಿಸಿಲ್ಲ ಸಾಮಾನ್ಯವಾಗಿ ಇವರು ಕಷ್ಟಪಡದೇ ಪರಸ್ಪರ ಪ್ರೀತಿಸಿ ವಿವಾಹವಾಗಿದ್ದಾರೆ. ಇದನ್ನು ಕಂಡರೂ ಸಹ ಇಂದು ಯಾರೂ ಸಹ ಇವರನ್ನು ಕೀಳರಿಮೆ ದೃಷ್ಟಿಯಿಂದ ನೋಡುವುದಿಲ್ಲ ಎಲ್ಲರಂತೆ ಅವರಿಗೂ ಕೂಡ ಗೌರವ, ಸ್ಥಾನಮಾನಗಳನ್ನು ನೀಡಿದ್ದಾರೆ. ಏಕೆಂದರೆ ಇಂದಿನ ದಿನಗಳಲ್ಲಿ ಇಂತಹ ವಿಷಯಗಳು ಸರ್ವೇಸಾಮಾನ್ಯವಾಗಿವೆ. ಇದಕ್ಕೆ ಮುಖ್ಯ ಕಾರಣವೆಂದರೆ ಸಾಮಾಜಿಕ ಸಂಸ್ಥೆಗಳಲ್ಲಿ ಆದ ತೀವ್ರತರ ಬದಲಾವಣೆಗಳು.

## ಮ್ಯಾಸಬೇಡರು ಹಾಗೂ ಹೊರುಬೇಡರ ಪ್ರೇಮವಿವಾಹವಾಗಿರುವ ದಂಪತಿಗಳ ಹೆಸರುಗಳು

| | | | |
|---|---|---|---|
| ಶ್ರೀ ಹನುಮಂತಪ್ಪ - ಮ್ಯಾಸಬೇಡರು<br>ಶ್ರೀಮತಿ ಸಾವಿತ್ರಮ್ಮ - ಊರುಬೇಡರು | ಪ್ರೇಮ ವಿವಾಹ | ಕೂಡ್ಲಿಗಿ | ೭ನೇ ವಾರ್ಡ್ |
| ಶ್ರೀ ಎಂ.ರಾಮಪ್ಪ - ಊರುಬೇಡರು<br>ಶ್ರೀಮತಿ ಭಾಗ್ಯಮ್ಮ - ಮ್ಯಾಸಬೇಡರು | ಪ್ರೇಮವಿವಾಹ | ಕೂಡ್ಲಗಿ | ೪ನೇ ವಾರ್ಡ್ |
| ಶ್ರೀ ಎನ್.ಕೃಷ್ಣ - ಮ್ಯಾಸಬೇಡರು<br>ಶ್ರೀಮತಿ ಶಾರದ - ಊರುಬೇಡರು | ಪ್ರೇಮವಿವಾಹ | ಕೂಡ್ಲಿಗಿ | ೫ನೇ ವಾರ್ಡ್ |
| ಶ್ರೀ ಎಸ್.ಕೊಟ್ರೇಶ್ - ಊರುಬೇಡರು<br>ಶ್ರೀಮತಿ ಲಕ್ಷ್ಮಿ - ಮ್ಯಾಸಬೇಡರು | ಪ್ರೇಮವಿವಾಹ | ಕೂಡ್ಲಿಗಿ | ೬ನೇ ವಾರ್ಡ್ |
| ಶ್ರೀ ಎಂ.ಕೃಷ್ಣಪ್ಪ - ಮ್ಯಾಸಬೇಡರು<br>ಶ್ರೀಮತಿ ಸೊಲ್ಲಮ್ಮ - ಊರುಬೇಡರು | ಪ್ರೇಮವಿವಾಹ | ಕೂಡ್ಲಿಗಿ | ೬ನೇ ವಾರ್ಡ್ |
| ಶ್ರೀ ನಾಗರಾಜ - ಮ್ಯಾಸಬೇಡರು<br>ಶ್ರೀಮತಿ ಅಕ್ಕಮ್ಮ - ಊರುಬೇಡರು | ಪ್ರೇಮವಿವಾಹ | ಕೂಡ್ಲಿಗಿ | ೬ನೇ ವಾರ್ಡ್ |
| ಶ್ರೀ ವೀರೇಶ - ಮ್ಯಾಸಬೇಡರು<br>ಶ್ರೀಮತಿ ಓಬಮ್ಮ - ಊರುಬೇಡರು | ಪ್ರೇಮವಿವಾಹ | ಕೂಡ್ಲಿಗಿ | ೭ನೇ ವಾರ್ಡ್ |
| ಶ್ರೀ ಗೋವಿಂದಪ್ಪ - ಮ್ಯಾಸಬೇಡರು<br>ಶ್ರೀಮತಿ ಸೊಲ್ಲಮ್ಮ - ಊರುಬೇಡರು | ಪ್ರೇಮವಿವಾಹ | ಕೂಡ್ಲಿಗಿ | ೫ನೇ ವಾರ್ಡ್ |
| ಶ್ರೀ ನರಸಿಂಹಪ್ಪ - ಮ್ಯಾಸಬೇಡರು<br>ಶ್ರೀಮತಿ ಮಂಜುಳ - ಊರುಬೇಡರು | ಪ್ರೇಮವಿವಾಹ | ಕೂಡ್ಲಿಗಿ | ೫ನೇ ವಾರ್ಡ್ |

### ಅಡಿಟಿಪ್ಪಣಿಗಳು

೧. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಪು. ೫೫
೨. ಮಾ.ಭ.ಪರ್ಲ, ಭಾರತೀಯ ವಿವಾಹ ಸಂಸ್ಕಾರ, ಪು. ೨
೩. ಅದೇ, ಪು. ೪
೪. ಕೆ.ಭೈರಪ್ಪ, ಭಾರತೀಯ ಸಮಾಜದ ಅಧ್ಯಯನ, ಪು. ೫೮
೫. ಶ್ಯಾಮಾಚರಣದುಬೆ, ಭಾರತೀಯ ಸಮಾಜ, ಪು. ೬೯
೬. ಎಂ.ಪಿ.ವೀಣಾ, ಮನೆ, ಸಮಾಜ ಮತ್ತು ಸಂಸ್ಕೃತಿ, ಪು. ೪೭
೭. ಮಾ.ಭ.ಪರ್ಲ, ಭಾರತೀಯ ವಿವಾಹ ಸಂಸ್ಕಾರ, ಪು. ೨೨
೮. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಪು. ೬೩
೯. ಅದೇ, ಪು. ೨೨
೧೦. ಡಾ.ಚಂದ್ರಶೇಖರ ಬಿ.ದಾಮ್ಲೆ, ಭಾರತೀಯ ಸಾಮಾಜಿಕ ಅಧ್ಯಯನ, ಪು. ೫೩
೧೧. ದಿಕ್ಸೂಚಿ ಆಗಸ್ಟ್ ೨೦೦೨, ಲೇಖನ, ಪ್ರಕಾಶ್ ಹೆಬ್ಬಾರ ಹಳವಳ್ಳಿ, ಪು. ೪೬
೧೨. ಗೊಲ್ಲಕಡಗ, ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಪು. ೧೧೧
೧೩. ಡಾ.ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಪು. ೭೯

# ೪

# ಬೇಡರ ಆರ್ಥಿಕ ಹಾಗು ಶೈಕ್ಷಣಿಕ ಬದುಕಿನ ಬದಲಾವಣೆಗಳು

## ೪.೧ ಆರ್ಥಿಕ ಬದಲಾವಣೆಗಳು

ಆದಿವಾಸಿ ಸಮಾಜದಲ್ಲಿ ಆರ್ಥಿಕತೆ ಬಗ್ಗೆ ಚಿಂತೆ ಇರಲಿಲ್ಲ. ಅಂದು ಅವರು ಒಂದು ದಿನಕ್ಕೆ ಬೇಕಾದಷ್ಟು ಆಹಾರವನ್ನು ಸಂಗ್ರಹಿಸಿಟ್ಟುಕೊಳ್ಳುತ್ತಿದ್ದರು. ಮಾನವನಲ್ಲಿ ಕ್ರಮೇಣ ಕೂಡಿಡುವ ಮನೋಭಾವ ಬೆಳೆದದ್ದರಿಂದ ಅವರು ಗಳಿಸುವ ಆಮಿಷಕ್ಕೆ ಒಳಗಾದರು ನಂತರ ಅವರು ತಮ್ಮದೇ ಆದ ಆರ್ಥಿಕ ಬೆಳವಣಿಗೆಗೆ ಮಹತ್ವ ನೀಡತೊಡಗಿದರು. ಆಧುನೀಕರಣಗೊಂಡ ಇಂದಿನ ಈ ಸಮಾಜದಲ್ಲಿ ಆರ್ಥಿಕತೆಗೆ ನೀಡುವಂತಹ ಪ್ರಾತಿನಿಧ್ಯ ಮತ್ತಾವ ವಿಷಯಕ್ಕೂ ನೀಡುವುದಿಲ್ಲ. ಬೇಡರಲ್ಲಿಯೂ ಈಗ ಆರ್ಥಿಕವಾಗಿ ತುಂಬಾ ಬದಲಾವಣೆಗಳಾಗಿರುವುದನ್ನು ಕಾಣಬಹುದು. ಕಳೆದ ೧೫-೨೦ ವರ್ಷಗಳ ಹಿಂದೆ ಕೂಡ್ಲಿಗಿ ವ್ಯಾಪ್ತಿಯಲ್ಲಿ ಬರುವ ಬೇಡರ ಆರ್ಥಿಕ ಸ್ಥಿತಿ ಚಿಂತಾಜನಕವಾಗಿತ್ತು. ಅಂದು ಇವರಿಗೆ ಈಗಿನಂತೆ ಆಸ್ತಿ ಸಂಪತ್ತು ಗಳಿಸುವ ಲೋಭವಿರಲಿಲ್ಲ. ಊರು ಬೆಳೆದಂತೆ ಇದರೊಂದಿಗೆ ಇತರೆ ಸಮುದಾಯದ ಜನರು ಬಂದು ವಾಸವಾಗತೊಡಗಿದರು. ಇಂತಹ ಜನರ ಪ್ರಭಾವದಿಂದಾಗಿ ಆರ್ಥಿಕ ಸ್ಥಿತಿ ಅಭಿವೃದ್ಧಿಪಡಿಸುವ ಪ್ರವೃತ್ತಿ ಬೆಳೆಸಿಕೊಂಡರು. ಇಂದಿನ ದಿನಗಳಲ್ಲಿ ಹಣ, ಆಸ್ತಿಗಳಿಗೆ ನೀಡುವ ಸ್ಥಾನಮಾನ ಬೇರಾವುದಕ್ಕೂ ನೀಡುವುದಿಲ್ಲ. ಹಿಂದೆ ಇಲ್ಲಿ ನೆಲೆಸಿದ್ದ ಬೇಡರ ಮನೆಗಳು ಸಾಮಾನ್ಯವಾಗಿ ಗುಡಿಸಲು ಮನೆಗಳಾಗಿದ್ದವು. ಇವರ ಮನೆ ಹಾಗೂ ವೇಷಭೂಷಣಗಳನ್ನು ನೋಡಿದಾಕ್ಷಣ

ಇವರ ಆರ್ಥಿಕ ವ್ಯವಸ್ಥೆ ಹೇಗಿದೆ ಎಂದು ಊಹಿಸಿಕೊಳ್ಳಬಹುದಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಇದು ಹುಸಿಯಾದಂತಿದೆ. ''ಈ ಹಿಂದೆ ಬೇಡರು ಬೇಟೆ, ಪಶುಪಾಲನೆ, ಸೈನಿಕ ವೃತ್ತಿಯನ್ನು ಕೈಗೊಂಡಿದ್ದರು. ಆದರೆ ಇಂದು ಕೃಷಿಕರಾಗಿ ಪರಿವರ್ತಿತರಾಗಿದ್ದಾರೆ''[೧] ಎಂಬುವ ಎಂ.ಪಿ.ವೀಣಾ ಅವರ ಅಭಿಪ್ರಾಯ ಸತ್ಯವೆನಿಸಿದೆ. ಇವರ ಆರ್ಥಿಕ ಸುಧಾರಣೆಯಲ್ಲಿ ಕೃಷಿ, ಕೃಷಿಯೇತರ ಕೂಲಿ, ವ್ಯಾಪಾರ ಎಂಬಿತ್ಯಾದಿ ಕುಸುಬುಗಳ ಪಾತ್ರ ಹಿರಿದಾಗಿದೆ. ಇಂದು ಈ ಪ್ರದೇಶದಲ್ಲಿನ ಬೇಡರ ಸಮುದಾಯದ ಕೆಲವು ವ್ಯಕ್ತಿಗಳು ಹೆಚ್ಚಿನ ಪ್ರಮಾಣದ ಆಸ್ತಿ ಹೊಂದಿದ್ದಾರೆ. ಇದರಲ್ಲಿ ಕೆಲವರು ನೀರಾವರಿ ಸೌಕರ್ಯ ಹೊಂದಿರುವವರಾದರೆ ಕೆಲವರು ಮಳೆಯನ್ನಾಧರಿಸಿದ ಕೃಷಿ ಅವಲಂಬಿಸಿದ್ದಾರೆ. ಈ ಹಿಂದೆ ಇದ್ದ ಸಾಕಷ್ಟು ಗುಡಿಸಲು ಮನೆಗಳು ಮಾಯವಾಗಿ ಆ ಸ್ಥಳದಲ್ಲಿ ಈಗ ಕಾಂಕ್ರೀಟ್, ಟೈಲ್ಸ್, ಕಬ್ಬಿಣ, ಸಿಮೆಂಟ್ ಇತ್ಯಾದಿಗಳಿಂದ ನಿರ್ಮಾಣಗೊಂಡ ಮನೆಗಳು ಉಗಮವಾಗಿವೆ. ಇಂದು ಇದು ಬೇಡರ ಮನೆ ಅಥವಾ ಬುಡಕಟ್ಟು ಸಮುದಾಯದವರ ಮನೆ ಎಂದು ಗುರುತಿಸುವುದು ಅಸಾಧ್ಯ. ಇದಕ್ಕೆಲ್ಲ ಮುಖ್ಯ ಕಾರಣ, ಇವರಲ್ಲಿ ಉಂಟಾಗಿರುವ ಆರ್ಥಿಕ ಬದಲಾವಣೆ. ಇಂತಹ ಪರಿಸ್ಥಿತಿಗಳ ನಡುವೆಯೂ ಇಲ್ಲಿ ಕೆಲವು ಜನ ಇನ್ನು ಕೂಲಿಯನ್ನೇ ಅವಲಂಬಿಸಿ ಜೀವನ ಸಾಗಿಸುವುದನ್ನು ಕಾಣಬಹುದಾಗಿದೆ. ಇವರು ಅನುಸರಿಸುವ ವೃತ್ತಿಗಳಲ್ಲಿ ಕೂಡ ಸಾಕಷ್ಟು ವ್ಯತ್ಯಾಸ ಹಾಗೂ ಬದಲಾವಣೆ ಅಗಿರುವುದು ಕಂಡುಬರುತ್ತದೆ. ಈ ಹಿಂದೆ ಅನುಸರಿಸುತ್ತಿದ್ದ ಮೂಲ ಕಸುಬುಗಳು ಇಂದು ಮಾಯವಾಗುತ್ತಿವೆ. ಇದಕ್ಕೆ ಹಲವಾರು ಕಾರಣಗಳಿವೆ. ಅವುಗಳೆಂದರೆ ರಾಜಕೀಯ, ಸಾರಿಗೆ ಸಂಪರ್ಕ, ವ್ಯಾಪಾರ ಮೊದಲಾದ ಕ್ಷೇತ್ರಗಳಲ್ಲಾದ ಬಾರಿ ಬೆಳೆವಣಿಗೆ ಅಥವಾ ಬದಲಾವಣೆಗಳು.

### ೪.೨ ಕಸುಬು ಹಾಗೂ ವೃತ್ತಿಗಳು

ಪ್ರತಿಯೊಂದು ಬುಡಕಟ್ಟು ಸಮುದಾಯವು ತನ್ನದೇ ಆದಂತಹ ನಿರ್ದಿಷ್ಟ ಕಸುಬನ್ನು ಹೊಂದಿದೆ. ಅದರಂತೆ ಆರಂಭದಲ್ಲಿ ಬೇಡರ ಕುಲಕಸುಬು ಬೇಟೆ ಇದರಿಂದ ಪಶುಪಾಲನೆ ಬಂದಿತು. ಇಂದು ಹಲವು ಬುಡಕಟ್ಟುಗಳ ಜನರು ತಮ್ಮ ಆರ್ಥಿಕ ಬದುಕಿನ ವಿಕಾಸಕ್ಕಾಗಿ ಇತರೆ ಕಸುಬು ಹಾಗೂ ವೃತ್ತಿಗಳನ್ನು ಅನುಸರಿಸಲು ಅನುವಾಗಿದ್ದಾರೆ. ಅದೇ ರೀತಿ ಈ ಪ್ರದೇಶದಲ್ಲಿರುವ ಬೇಡ ಸಮುದಾಯದ ಜನರು ತಮ್ಮ ಆರ್ಥಿಕ ಮಟ್ಟದ ಸುಧಾರಣೆಗಾಗಿ ಇತರೆ ವೃತ್ತಿಗಳನ್ನು ಅವಲಂಬಿಸಿದ್ದಾರೆ. ಇದು ಒಂದು ರೀತಿಯ ಬದಲಾವಣೆಯೇ ಸರಿ. ಇನ್ನು ಬೇಟೆ, ಪಶುಪಾಲನೆ, ಕೃಷಿ ಇವುಗಳಲ್ಲಿ ಆಗಿರುವ ಬದಲಾವಣೆಗಳ ಬಗ್ಗೆ ತಿಳಿಯೋಣ

#### ಬೇಟೆ

ಆರಂಭದಲ್ಲಿ ಬೇಟೆ ಬೇಡರ ಮೂಲ ಕಸುಬಾಗಿತ್ತು. ''ಮೂಲತ: ಬೇಟೆಯೇ ಬೇಡರ ಮೂಲ ಕುಲಕಸುಬು''[೨] ಎಂಬುದಾಗಿ ಡಾ.ಕೆ.ಎಂ.ಮೈತ್ರಿ ಅಭಿಪ್ರಾಯಪಟ್ಟಿದ್ದಾರೆ. ಇವರ ಈ ವೃತ್ತಿಗನುಸಾರವಾಗಿಯೇ ಇವರಿಗೆ ಬೇಡರು ಎಂಬ ಹೆಸರು ಬಂದಿರಬಹುದು. ಬೇಟೆಯಾಡಲು ಇಂದು ಮೊದಲಿನಂತೆ ಕಾಡುಗಳೇ ಇಲ್ಲ ಅವುಗಳನ್ನೆಲ್ಲ ಕಡಿದು ನಾಡನ್ನಾಗಿ ಪರಿವರ್ತಿಸಿದ್ದಾರೆ. ಹೀಗಿರುವಾಗ ಬೇಟೆ ಎಂಬ ವೃತ್ತಿ ನಶಿಸಿ ಹೋಗುತ್ತಿದೆ. ಕೂಡ್ಲಿಗಿಯಂತಹ ಪಟ್ಟಣ ಪ್ರದೇಶಗಳಲ್ಲಿ ಕೇವಲ ಕಾಂಕ್ರಿಟ್ ಕಾಡನ್ನು ಮಾತ್ರ ಕಾಣುತ್ತೇವೆ.

ಆದರೂ ಸಹ ಕೂಡ್ಲಿಗಿಯಿಂದ ಸುಮಾರು ೨೦-೨೫ ಕಿ.ಮೀ. ದೂರದಲ್ಲಿ ಕಾಡು ಇದೆ. ಆದರೆ ಅಲ್ಲಿಗೆ ಬೇಟೆಯಾಡುವ ಗೋಜಿಗೆ ಹೋಗುವುದೇ ಇಲ್ಲ. ಪ್ರಾಣಿಗಳನ್ನು ಬೇಟೆಯಾಡುವುದು ಕಾನೂನಿನ ಪ್ರಕಾರ ಅಪರಾಧವೆಂದು ತಿಳಿದಿರುವ ಇವರು ಬೇಟೆಯಾಡಲು ಇನ್ನೆಲ್ಲಿ ಹೋಗಬೇಕು. ಆದರೆ ವರ್ಷಕ್ಕೊಮ್ಮೆ ಅಂದರೆ ಯುಗಾದಿ ಹಬ್ಬದಲ್ಲಿ ಮಾತ್ರ 'ಯುಗಾದಿ ಬೇಟೆ' ಹೋಗುವ ಸಂಪ್ರದಾಯವನ್ನು ಇವರು ಇನ್ನೂ ಉಳಿಸಿಕೊಂಡು ಬಂದಿದ್ದಾರೆ. ಆದರೆ ಬೇಟೆಯನ್ನೇ ಅವಲಂಬಿಸಿ ಜೀವನ ಸಾಗಿಸುವುದು ಇಲ್ಲಿ ಕಷ್ಟಸಾಧ್ಯ ಇನ್ನು ಕೆಲವು ಮನೆಗಳಲ್ಲಿ ಹಳೇ ಕಾಲದ ಬಂದೂಕು, ಗಂಡುಗೊಡಲಿ, ಮೊಲದಬಲೆ, ಮೀನಿನಬಲೆ ಇರುವುದು ಕಂಡುಬರುತ್ತದೆ. ಈಗ ಅವು ಬೇಟೆಯಾಡಲು ಬಳಕೆಯಾಗದೇ ವಸ್ತು ಸಂಗ್ರಹಾಲಯದಲ್ಲಿ ಇಟ್ಟ ವಸ್ತುಗಳಂತೆ ಮನೆಗಳಲ್ಲಿ ಮಾತ್ರ ಪ್ರದರ್ಶನಗೊಳ್ಳುತ್ತಿವೆ. ಈಗಲೂ ಇಲ್ಲಿನ ಕೆಲವು ವ್ಯಕ್ತಿಗಳು ಹವ್ಯಾಸಕ್ಕಾಗಿ ಹೊಲಗಳಲ್ಲಿ ಇಲಿಬೇಟೆ ಹಾಗೂ ಕೆಲವು ಸಾರಿ ಮೀನುಹಿಡಿಯಲು ಹೋಗುವ ಸಂಪ್ರದಾಯ ಉಳಿಸಿಕೊಂಡಿದ್ದಾರೆ. ಬರ ಪರಿಸ್ಥಿತಿಯ ಈ ಕಾಲದಲ್ಲಿ ಸುತ್ತಲಿನ ಕೆರೆ ಕಟ್ಟೆಗಳೆಲ್ಲ ನೀರಿಲ್ಲದೆ ಒಣಗಿ ಹೋಗಿವೆ. ಇದರಿಂದ ಮೀನುಹಿಡಿಯಲು ಹೋಗುತ್ತಿದ್ದ ಜನ ಕೆರೆ ಹೂಳೆತ್ತಲು ಕೂಲಿ ಹೋಗುತ್ತಿದ್ದಾರೆ. ಒಂದು ಕಾಲದಲ್ಲಿ ಮೀನಿನ ಬೇಟೆಗೆ ಹೋಗಿ ಸಾಕಷ್ಟು ಪ್ರಮಾಣದಲ್ಲಿ ಮೀನು ಹಿಡಿದು ತಂದು ಅವುಗಳಲ್ಲಿ ಮನೆಗೆ ಸ್ವಲ್ಪ ಉಳಿಸಿಕೊಂಡು ಮಿಕ್ಕವುಗಳನ್ನೆಲ್ಲ ಮಾರಾಟ ಮಾಡುವ ಪದ್ಧತಿ ಇತ್ತು. ಕ್ರಮೇಣ ಬೇಟೆ ವೃತ್ತಿ ಕ್ಷೀಣಿಸುತ್ತಾ ಬಂದಿತು. ಇದಕ್ಕೆ ಪರ್ಯಾಯವಾಗಿಯೋ ಎಂಬಂತೆ ಬೇಡರು ತಮ್ಮನ್ನು 'ನಾಯಕರು' ಎಂದು ಕರೆದುಕೊಂಡಿದ್ದಾರೆ. 'ಬೇಟೆ' ಜೊತೆಗೆ 'ಬೇಡ' ಎಂಬ ಪದವೂ ತೆರೆಮರೆಗೆ ಸರಿಯುತ್ತಿದೆ.

**ಪಶುಪಾಲನೆ**

ಬೇಟೆ ಹಂತದಿಂದ ಮುಂದುವರೆದ ಹಂತವೇ ಪಶುಪಾಲನಾ ಹಂತವೆಂದು ಹೇಳಲಾಗಿದೆ. "ಇಲ್ಲಿವರೆಗೂ ಮ್ಯಾಸಬೇಡರನ್ನು ಬೇಟೆ ಸಂಸ್ಕೃತಿಗೆ ಸೇರಿದವರೆಂದು ನಂಬಲಾಗಿತ್ತು. ಹಾಗೆಂದೇ ವ್ಯಾಖ್ಯಾನಿಸಲಾಗುತ್ತಿತ್ತು. ಆದರೆ ಇತ್ತೀಚೆಗಿನ ಶೋಧನೆ ನಂತರ ಈ ಅನಿಸಿಕೆ ಹುಸಿಯಾಗಿದೆ"[೬] ಎಂದು ಮೀರಸಾಬಿಹಳ್ಳಿ ಶಿವಣ್ಣನವರು ಉಲ್ಲೇಖಿಸಿದ್ದಾರೆ. ಈ ಹೇಳಿಕೆ ಇಂದು ಸತ್ಯವೆನಿಸುತ್ತದೆ. ಏಕೆಂದರೆ ಕೂಡ್ಲಿಗಿ ಸುತ್ತಲಿನ ಪರಿಸರದಲ್ಲಿ ಈಗಲೂ ದಟ್ಟಕಾಡುಗಳಿದ್ದುದು ಕಂಡುಬರುತ್ತದೆ. ಸದ್ಯ ಬರಗಾಲದಿಂದಾಗಿ ಒಣಗಿಹೋಗಿವೆ. ಹಿಂದೆ ಬೇಡರಲ್ಲಿ ಪಶುಪಾಲನೆ ವೃತ್ತಿ ಇತ್ತು. ದನ, ಕರು, ಎತ್ತು ಜೊತೆಗೆ ಕುರಿ, ಮೇಕೆ, ಎಮ್ಮೆ ಇತ್ಯಾದಿ ಸಾಕುಪ್ರಾಣಿಗಳನ್ನು ಸಾಕುತ್ತಿದ್ದರು. ಅಂದಿನ ದಿನಗಳಲ್ಲಿ ಹಲವು ಕುಟುಂಬಗಳು ಇವುಗಳಿಂದ ಬರುವ ಹೈನು ಹಾಗೂ ಅವುಗಳ ಉತ್ಪನ್ನದಿಂದ ಜೀವನ ಸಾಗಿಸುತ್ತಿದ್ದರು. ಒಂದು ಮನೆಯಲ್ಲಿ ಕನಿಷ್ಠ ಪಕ್ಷ ೪ - ೫ ಆಕಳು, ೨ - ೩ ಎತ್ತು , ಎಮ್ಮೆ ಜೊತೆಗೆ ಒಂದೆರಡು ಕುರಿ ಇರುತ್ತಿದ್ದವು. ಇವುಗಳಿಗಾಗಿ ಪ್ರತ್ಯೇಕ ಕೊಟ್ಟಿಗೆಗಳೂ ಸಹ ಇರುತ್ತಿದ್ದವು. ಇದರಿಂದ ಬರುವ ಉತ್ಪನ್ನಗಳನ್ನು ಇತರೆ ಜನರಿಗೆ ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದರು. ಇಂದಿಗೂ ಕೆಲವು ಕುಟುಂಬಗಳು ಇದನ್ನೇ ಅವಲಂಬಿಸಿವೆ. ಅಂದು ಇವರ ದನಕರುಗಳನ್ನು ಮೇಯಿಸಿಕೊಂಡು ಬರುವ ಕೆಲವು ವ್ಯಕ್ತಿಗಳಿದ್ದರು ಅವರೂ ಸಹ ಇದೇ ಸಮುದಾಯದವರಾಗಿದ್ದರು ಇದರಿಂದ ಅವರ ಜೀವನ ಸುಗಮವಾಗಿ ಸಾಗುತ್ತಿತ್ತು. ಕೃಷಿಗೆ ಹೆಚ್ಚಾಗಿ ಮಳೆಯನ್ನೇ ಆಧರಿಸಿರುವುದರಿಂದ ಬರಗಾಲದಿಂದಾಗಿ ಊರಿನಲ್ಲಿರುವ ದನ ಕರುಗಳ ಸಂಖ್ಯೆ ಕ್ಷೀಣಿಸುತ್ತಾ ಬಂದಿತು. ಇದನ್ನೇ ನಂಬಿದ್ದ ಅವರ ಜೀವನ ಸ್ವಲ್ಪ ಕಷ್ಟವಾಯಿತು. ನಂತರ

ಪರಿವರ್ತನೆಯಾಗಿ ಕೆಲವರು ನೀರಾವರಿ ಸೌಕರ್ಯವನ್ನು ಪಡೆದರು ಇದರಿಂದಾಗಿ ಸ್ವಲ್ಪ ಸುಧಾರಿಸಿತು. ಒಂದು ಕಾಲದಲ್ಲಿ ಹಾಲು, ಮೊಸರು, ಮಜ್ಜಿಗೆ ಯಥೇಚ್ಛವಾಗಿ ದೊರಕುತ್ತಿದ್ದ ಈ ಊರಿನಲ್ಲಿ ಈಗ ನೀರಿಗೂ ಪರದಾಡುವ ಸ್ಥಿತಿ ಬಂದೊದಗಿದೆ. ಸಾಕಷ್ಟು ಕುಟುಂಬಗಳು ಹಾಲಿಗಾಗಿ ಪರ್ಯಾಯ ವ್ಯವಸ್ಥೆ ಮಾಡಿಕೊಂಡಿರುವ ಪ್ರಸಂಗಗಳಿವೆ. ಇನ್ನು ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ದನಕರುಗಳ ಮಾರಾಟದಲ್ಲಿ ದಲ್ಲಾಳಿಗಳು ಕಂಡುಬರುತ್ತಿದ್ದರು. ಅವರು ಬೇರೆ ಊರಿಗೆ ಹೋಗಿ ಅಲ್ಲಿಂದ ಸಣ್ಣ ಹೋರಿ ಹಸು, ಎಮ್ಮೆಗಳನ್ನು ಕೊಂಡುತಂದು ಅವುಗಳನ್ನು ಚೆನ್ನಾಗಿ ಮೇಯಿಸಿ ಪಾಲನೆ ಮಾಡಿ ನಂತರ ಮಾರಾಟ ಮಾಡುತ್ತಿದ್ದರು. ಜೊತೆಗೆ ೨ - ೩ ಕುರಿಗಳನ್ನು ಸಹ ಸಾಕಿ ಮಾರಾಟ ಮಾಡಿ ಬಂದ ಲಾಭದಿಂದ ಜೀವನ ಸಾಗಿಸುತ್ತಿದ್ದರು. ಈಗಲೂ ಇಂತಹ ವ್ಯಕ್ತಿಗಳು ಇಲ್ಲಿದ್ದಾರೆ. ಈ ಸಮುದಾಯಕ್ಕೆ ಸೇರಿದ ೩ - ೪ ಕುರಿ ಹಟ್ಟಿಗಳನ್ನು ಈ ಊರಿನಲ್ಲಿರುವುದು ಕಂಡುಬರುತ್ತದೆ. ಇವೇ ಇವರ ಜೀವನಕ್ಕೆ ಅಂದರೆ ಕುರಿ, ಮೇಕೆಗಳೇ ಅವರ ಜೀವನಾಧಾರವಾಗಿವೆ. ಬರಗಾಲದ ವಾತಾವರಣದಿಂದಾಗಿ ಇಂತ ವೃತ್ತಿ ಅವಲಂಬಿಸಿರುವ ವ್ಯಕ್ತಿಗಳ ಜೀವನಸ್ಥಿತಿ ತುಂಬಾ ಚಿಂತಾಜನಕವಾಗಿದೆ. ಇದರಿಂದಾಗಿ ಜೀವನಕ್ಕೆ ಇವರು ಬೇರೆ ಮಾರ್ಗ ಕಂಡುಕೊಳ್ಳುತ್ತಿದ್ದಾರೆ. ಇದು ಅನಿವಾರ್ಯವಾದ ಪ್ರಸಂಗವಾಗಿದೆ.

**ಕೃಷಿ**

ಮಾನವ ತನ್ನ ಜೀವನದ ವಿಕಾಸದ ಹಾದಿಯಲ್ಲಿ ಸಾಮಾನ್ಯವಾಗಿ ಪಶುಪಾಲನಾ ಹಂತದಿಂದ ಕೃಷಿಹಂತಕ್ಕೆ ಕಾಲಿರಿಸಿದ್ದಾನೆ. ಇದಕ್ಕೆ ಬೇಡ ಸಮುದಾಯವು ಸೇರಿದೆ. ಈ ವ್ಯವಸ್ಥೆ ಇತರೆ ಪ್ರದೇಶಗಳಲ್ಲಿಯೂ ಇದೆ. ಕೂಡ್ಲಿಗಿಯಲ್ಲಿನ ಬೇಡ ಸಮುದಾಯವು ಪಶುಪಾಲನೆ ಜೊತೆಗೆ ಕೃಷಿಯನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಪ್ರಸ್ತುತ ದಿನಗಳಲ್ಲಿ ಪಶುಪಾಲನೆ ವೃತ್ತಿಗಿಂತ ಕೃಷಿಗೆ ಹೆಚ್ಚು ಮಹತ್ವ ನೀಡಿದ್ದಾರೆ. ಕೃಷಿಯಿಂದಾಗಿ ಇಲ್ಲಿನ ಜನರ ಜೀವನ ಸ್ವಲ್ಪ ಸುಧಾರಿಸಿದೆ ಎಂದು ಹೇಳಬಹುದು. ಕೆಲವು ದಿನಗಳ ಹಿಂದೆ ಇವರ ವ್ಯವಸಾಯ ಮಳೆ ಅವಲಂಬಿತವಾಗಿತ್ತು. ಅಂದು ಅವರು ಹೆಚ್ಚಾಗಿ ಆಹಾರ ಧಾನ್ಯಗಳನ್ನು ಬೆಳೆಯುತ್ತಿದ್ದರು. ಇದರಲ್ಲಿ ತಮಗೆ ಬೇಕಾದಷ್ಟು ಉಳಿಸಿಕೊಂಡು ಮಿಕ್ಕಿದ್ದನ್ನು ಮಾರಾಟ ಮಾಡುವ ಪದ್ಧತಿ ಇತ್ತು. ನಂತರದ ದಿನಗಳಲ್ಲಿ ಇವರು ಕೃಷಿಯಲ್ಲಿ ಸುಧಾರಿತ ಕ್ರಮಗಳನ್ನು ಅನುಸರಿಸಿದರು. ಕೂಡ್ಲಿಗಿ ಸುತ್ತಮುತ್ತ ಒಣ ಭೂಮಿ ಇದ್ದರೂ ಇದರಲ್ಲಿಯೇ ಸ್ವಲ್ಪ ಸುಧಾರಿತ ಬೇಸಾಯಕ್ರಮ ಅನುಸರಿಸುತ್ತಿದ್ದಾರೆ. ಈ ಪಟ್ಟಣದ ಅಕ್ಕ ಪಕ್ಕ ಯಾವುದೇ ದೊಡ್ಡ ನದಿ, ಕಾಲುವೆಗಳಿಲ್ಲ. ಆದರೆ ಒಂದು ಕೆರೆ ಮಾತ್ರ ಇದೆ. ಇದರಲ್ಲಿ ನೀರು ಊರಿನ ಎಲ್ಲ ರೈತರ ಪಾಲಿಗೆ ಸಿಗಲಾರದು. ಇಂತಹ ಪರಿಸ್ಥಿತಿಗಳಲ್ಲಿ ಇವರು ನೀರಿಗಾಗಿ ಕೊಳವೆ ಬಾವಿಗಳನ್ನು ನಿರ್ಮಿಸಿಕೊಂಡು ಅವುಗಳ ಉಪಯೋಗ ಪಡೆದು ಕೃಷಿಯಲ್ಲಿ ಇಂದು ಬದಲಾವಣೆ ಕಂಡುಕೊಂಡಿದ್ದಾರೆ. ಮೊದಲಿಗೆ ಕೃಷಿಯಲ್ಲಿ ನೇಗಿಲು, ಎತ್ತಿನಬಂಡಿ ಇತ್ಯಾದಿಗಳ ಬಳಕೆ ಇವರಲ್ಲಿ ಹೆಚ್ಚಾಗಿತ್ತು. ಕಾಲಕಳೆದಂತೆ ಇವುಗಳ ಬದಲಿಗೆ ಟ್ರಾಕ್ಟರ್, ಪಂಪ್‌ಸೆಟ್ ಇತ್ಯಾದಿ ತಾಂತ್ರಿಕ ಉಪಕರಣಗಳ ಬಳಕೆ ಮಾಡುತ್ತಿದ್ದಾರೆ. ಇದರಿಂದಾಗಿ ಇವರ ಕೃಷಿಕ ಬದುಕು ಉತ್ತಮವಾಗಿ ಸಾಗುತ್ತಿದೆ. ಇನ್ನು ಬೀಜ ಗೊಬ್ಬರಗಳ ಬಗ್ಗೆ ಹೇಳುವುದಾದರೆ ಮೊದಲಿಗೆ ತಮ್ಮಲ್ಲಿಯೇ ಇರುವ ಬೀಜ, ಕೊಟ್ಟಿಗೆ ಗೊಬ್ಬರಗಳ ಬಳಕೆ ಮಾಡುತ್ತಿದ್ದರು. ಇದರಲ್ಲಿಯೂ ಸಹ ಪರಿವರ್ತನೆಯಾಗಿ ರಸಾಯನಿಕ ಗೊಬ್ಬರ, ಸುಧಾರಿತ ತಳಿಬೀಜಗಳು

ಹಾಗೂ ಕ್ರಿಮಿನಾಶಕಗಳನ್ನು ಬಳಸುವ ಪ್ರಜ್ಞೆ ಪಡೆದುಕೊಂಡಿದ್ದಾರೆ. ಇನ್ನು ಬೆಳೆಗಳಲ್ಲಿ ಆಹಾರ ಧಾನ್ಯದ ಜೊತೆಗೆ ಸ್ವಲ್ಪ ಪ್ರಮಾಣದಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುವುದನ್ನು ರೂಢಿಸಿಕೊಂಡಿದ್ದರು. ಜೀವನ ನಿರ್ವಹಣೆಗೆ ಅವಶ್ಯಕವಾಗಿ ಬೇಕಾದ ಹಣಕಾಸಿನ ಅವಶ್ಯಕತೆಯ ಉದ್ದೇಶದಿಂದ ಕ್ರಮೇಣ ಕೇವಲ ವಾಣಿಜ್ಯ ಬೆಳೆಗಳಿಗೆ ಮಾತ್ರ ಆದ್ಯತೆ ನೀಡತೊಡಗಿದರು. ಬರುಬರುತ್ತಾ ಆಹಾರ ಧಾನ್ಯಗಳೇ ಇವರಿಗೆ ಸಿಗದಂತೆ ಆದವು ಅಂದರೆ ಇಲ್ಲಿ ಮೊದಲಿನ ರೀತಿಯಲ್ಲಿ ಬೆಳೆದಂತೆ ಆಹಾರ ಧಾನ್ಯಗಳನ್ನು ಬೆಳೆಯುತ್ತಿಲ್ಲ. ಒಂದು ಮುಖ್ಯವಾದ ಅಂಶವೆಂದರೆ ಇಲ್ಲಿನ ಶೇಕಡ ೬೦ ರಷ್ಟು ಕೃಷಿಕರು ಕೇವಲ ಮಳೆಯಾಧಾರಿತ ಕೃಷಿಕ್ರಮವನ್ನು ಅನುಸರಿಸಿರುವುದರಿಂದ ವ್ಯವಸಾಯದಿಂದ ಯಾವ ಲಾಭವೂ ಇಲ್ಲವೆಂಬ ಅಭಿಪ್ರಾಯಕ್ಕೆ ಬಂದಿದ್ದಾರೆ. ಜೀವನ ಸಾಗಿಸಲು ಏನಾದರೂ ಮಾಡಲೇಬೇಕಲ್ಲವೆ ಅದಕ್ಕೆ ಇವರು ಇಂದು ಕೃಷಿಯೇತರ ಕೂಲಿ, ವ್ಯಾಪಾರ ಇತ್ಯಾದಿ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಕೆಲವು ಮನೆಗಳಲ್ಲಿ ಮಕ್ಕಳಿಂದ ಹಿಡಿದು ಮುದುಕರವರೆಗೆ ದೂರದ ಊರುಗಳಿಗೆ ಕೂಲಿಗೆ ಹೋಗುವ ಪರಿಸ್ಥಿತಿ ಇಂದಿಗೂ ಇದೆ. ಕೆಲವು ಕುಟುಂಬಗಳಲ್ಲಿ ಕೃಷಿಯೇ ಪ್ರಧಾನವಾಗಿದ್ದು, ಅವರ ಜೀವನಕ್ರಮ ಉತ್ತಮವಾಗಿರಲು ಕೃಷಿಯೇ ಆಧಾರವಾಗಿದೆ. ಇವರು ತೋಟಗಳನ್ನು ಬೆಳೆಸಿ ಅದರಲ್ಲಿ ತೆಂಗು, ಮಾವು ಇತ್ಯಾದಿ ಬೆಳೆ ಬೆಳೆಯುವುದರಲ್ಲಿ ತಮ್ಮ ಕುಶಲತೆ ತೋರಿದ್ದಾರೆ. ಆದರೆ ಹೊಸ ತಲೆಮಾರಿನ ಜನ ಕೃಷಿಯಿಂದ ಯಾವ ಲಾಭವು ಇಲ್ಲ ಎನ್ನುವ ಭಾವನೆ ತಳೆದಿದ್ದಾರೆ. ಸದ್ಯದ ಪರಿಸ್ಥಿತಿಗಳಲ್ಲಿ ಇವರ ಬೆಳೆಗಳಿಗೆ ತಕ್ಕ ಬೆಲೆ, ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯದೇ ತೊಳಲಾಡುತ್ತಿದ್ದಾರೆ.

**ಕೃಷಿಯೇತರ ಕೂಲಿ**

ಅಧಿಕ ಪ್ರಮಾಣದ ಜಮೀನನ್ನು ಹೊಂದಿದ್ದು ಕೃಷಿಯಲ್ಲಿ ಮುಂದುವರೆದ ಕೆಲವು ಕುಟುಂಬಗಳನ್ನು ಹೊರತುಪಡಿಸಿ ಉಳಿದ ಜನರು ಕೃಷಿಯೇತರ ಕೂಲಿ ಕೆಲಸಗಳನ್ನು ಮಾಡುತ್ತಿದ್ದಾರೆ. ಈಗ ಇದು ಅನಿವಾರ್ಯವಾಗಿದೆ. ಸಮಾಜದಲ್ಲಿ ಚೆನ್ನಾಗಿ ಬಾಳಬೇಕೆಂದರೆ ಏನಾದರೂ ಒಂದು ವೃತ್ತಿಯನ್ನು ಅವಲಂಬಿಸಲೇಬೇಕಾಗಿದೆ. ಇತರೆ ಸಮುದಾಯದವರ ಜಮೀನುಗಳಲ್ಲಿ ಕೆಲಸ ಮಾಡಿ ಕೃಷಿ ಸಂಬಂಧಿತ ಕೆಲಸಗಳಿಲ್ಲದ ಕಾಲದಲ್ಲಿ ಇವರು ಅನಿವಾರ್ಯವಾಗಿ ಕೃಷಿಯೇತರ ಕೂಲಿ ಕೆಲಸಗಳಿಗೆ ಹೋಗುತ್ತಾರೆ. ಇದರಿಂದ ಬಂದ ಕೂಲಿಯಿಂದ ಹೊಟ್ಟೆಗೆ ಬಟ್ಟೆಗೆ ಸರಿಯಾಗಿದ್ದಾರೆ.

**ಮನೆಕಟ್ಟುವ ಕೆಲಸ**

ಬೇಟೆಯಾಡಿ ಜೀವನ ಸಾಗಿಸುತ್ತಿದ್ದ ಅಂದಿನ ಬೇಡ ಸಮುದಾಯದ ಜನರು ಇಂದು ವಿವಿಧ ವಿನ್ಯಾಸದ ಮನೆಗಳನ್ನು ನಿರ್ಮಿಸುವ ಕಲೆ ಹೊಂದಿರುವ ಹಲವು ಬೇಲ್ದಾರರು ಇವರಲ್ಲಿದ್ದಾರೆ. ಕೇವಲ ಮಳೆ, ಗಾಳಿ, ಚಳಿಯಿಂದ ತಮ್ಮನ್ನು ರಕ್ಷಿಸಿ ಕೊಳ್ಳಲು ಒಂದು ಗುಡಿಸಲನ್ನು ನಿರ್ಮಿಸಿಕೊಳ್ಳುತ್ತಿದ್ದ ಕೈಗಳು ಇಂದು ಸಿಮೆಂಟು, ಇಟ್ಟಿಗೆ, ಹಾಲುಗಲ್ಲು ಇತ್ಯಾದಿಗಳಿಂದ ಮನೆ ನಿರ್ಮಿಸುವ ಸಾಮರ್ಥ್ಯ ಪಡೆದಿದ್ದಾರೆ. ಇದು ಒಂದು ರೀತಿಯ ಕಷ್ಟದ ಕೆಲಸ. ಬೇಡರು ದೈಹಿಕವಾಗಿ ಬಲಶಾಲಿಗಳಾಗಿರುವುದರಿಂದ ಇಂತಹ ಕೆಲಸ ನಿರ್ವಹಿಸುವುದರಲ್ಲಿ ನಿಸ್ಸೀಮರಾಗಿದ್ದಾರೆ. ಈ ವೃತ್ತಿಯನ್ನು ಅವಲಂಬಿಸಿ ಕೆಲವು ಕುಟುಂಬಗಳು ಜೀವನ ಸಾಗಿಸುತ್ತಿವೆ. ಇದರ ಜೊತೆಗೆ ಇವರ ಸಹಾಯಕ್ಕಾಗಿ ಕೆಲವು ಜನ ಕೂಲಿಗಾಗಿ ಅವಲಂಬಿಸಿದ್ದಾರೆ. ಒಮ್ಮೊಮ್ಮೆ ಇಂತಹ ಕೆಲಸಗಳಲ್ಲಿ

ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಮೊದಲಿಗೆ ಈ ಪ್ರದೇಶದಲ್ಲಿ ಇಂತಹ ಕೆಲಸ ಮಾಡುವಲ್ಲಿ ಈ ಸಮುದಾಯದವರ ಪಾಲು ಸೊನ್ನೆ ಆಗಿತ್ತು. ಕಾಲ ಕಳೆದಂತೆ ಈ ವೃತ್ತಿ ಅನುಸರಿಸುತ್ತಿರುವ ಇತರೆ ಸಮುದಾಯವರು ಬಂದು ನೆಲೆಸಿದರು. ಇವರ ಪ್ರಭಾವದಿಂದಾಗಿ ಇಂದು ಬೇಡ ಸಮುದಾಯದಲ್ಲಿ ಹಲವಾರು ಜನ ಈ ವೃತ್ತಿಯನ್ನು ಅವಲಂಬಿಸಿರುವುದನ್ನು ಕಾಣಬಹುದಾಗಿದೆ. ಇತರೆ ಸಮುದಾಯವರೊಂದಿಗೆ ಬೆರೆತು ಕೆಲಸ ನಿರ್ವಹಿಸುವ ಬೇಡರು ಇದ್ದಾರೆ. ಇವರು ಅವರಿಂದ ದಿನಕ್ಕೆ ರೂಪಾಯಿ ೭೦ ರಿಂದ ೧೦೦ ಗಳ ವರೆಗೆ ಕೂಲಿ ಪಡೆಯುತ್ತಾರೆ. ಅದೇ ರೀತಿ ಸಹಾಯಕರಾಗಿ ಬಂದ ಕೆಲಸಗಾರರಿಗೆ ಕೂಲಿ ಹಣ ಗಂಡಸರಿಗೆ ರೂಪಾಯಿ ೫೦, ಹೆಂಗಸರಿಗೆ ರೂಪಾಯಿ ೩೫ ಕೊಡುವುದನ್ನು ಕಾಣಬಹುದಾಗಿದೆ. ಇಂತಹ ಕೆಲಸಗಳನ್ನು ಮಹಿಳೆಯರು ಸಹ ನಿರ್ವಹಿಸುವುದನ್ನು ನೋಡಬಹುದಾಗಿದೆ.

**ಮರಗೆಲಸ**

ಮನೆಕಟ್ಟುವ ಕೆಲಸದವರೊಂದಿಗೆ ಮನೆಗೆ ಬೇಕಾದ ಕಟ್ಟಿಗೆ ಕೆಲಸಗಳನ್ನು ಮಾಡುವ ವೃತ್ತಿ ಇಲ್ಲಿನ ಬೇಡ ಸಮುದಾಯವರು ಅವಲಂಬಿಸಿದ್ದಾರೆ. ಮನೆಗಳಿಗೆ ಬೇಕಾದ ಬಾಗಿಲು, ಕಿಟಕಿ, ಕುರ್ಚಿ ಮೊದಲಾದ ಪಿಠೋಪಕರಣಗಳನ್ನು ತಯಾರಿಸುತ್ತಾರೆ. ಮೊದಲಿಗೆ ಇಲ್ಲಿ ಮರಗೆಲಸ ಮಾಡಲು ಬೇರೆ ಸಮುದಾಯದ ಜನರು ಇಲ್ಲಿ ಬಂದು ನೆಲೆಸಿದರು ಇವರೊಂದಿಗೆ ಕೂಲಿ ಕೆಲಸಕ್ಕೆ ಹೋಗುತ್ತಿದ್ದ ಬೇಡ ಸಮುದಾಯದ ಜನರು ಈ ವೃತ್ತಿಯನ್ನು ಉತ್ತಮವಾಗಿ ಕಲಿತು ಇದೇ ವೃತ್ತಿ ಅವಲಂಬಿಸುವಂತಾಯಿತು. ಇದು ಇವರ ಮೂಲ ಕಸುಬಾಗಿರದೇ ಇತರೆಯವರಿಂದ ಪ್ರಭಾವಗೊಂಡ ವೃತ್ತಿಯಾಗಿದೆ. ಇವರೊಂದಿಗೆ ಸಹಾಯಕರಾಗಿ ಕೂಲಿಕೆಲಸಕ್ಕೆ ಇದೇ ಸಮುದಾಯದವರು ಬರುತ್ತಿದ್ದರು. ಇದರಿಂದಾಗಿ ಅವರು ಸಹ ಈ ವೃತ್ತಿ ಕಲಿತು ಸ್ವತಂತ್ರವಾಗಿ ಈ ಕೆಲಸ ಮಾಡುವಲ್ಲಿ ಮುಂದಾಗಿದ್ದಾರೆ. ದೊಡ್ಡ ಮನೆಗಳಿಗೆ ತಕ್ಕಂತೆ ಬಾಗಿಲು ಅವುಗಳ ಮೇಲಿನ ಚಿತ್ತಾರ, ಶೋಕೇಸ್, ಹೆಂಗಸರ ಅಡುಗೆ ಕೆಲಸಕ್ಕೆ ಬೇಕಾಗುವ ಲಟ್ಟಣಿಗೆ, ಮುದ್ದೆಕೋಲು, ಮಣೆ ಮೊದಲಾದ ಉಪಕರಣಗಳನ್ನು ತಯಾರಿಸುತ್ತಾರೆ. ಹಲವು ರೀತಿಯ ವಿನ್ಯಾಸದಲ್ಲಿ ಪೀಠೋಪಕರಣಗಳನ್ನು ತಯಾರಿಸುತ್ತಾರೆ. ಇದು ಒಂದು ರೀತಿಯಾದರೆ ಕೆಲವು ವ್ಯಕ್ತಿಗಳು ಕೃಷಿ ಸಲಕರಣೆಗಳನ್ನು ಮಾತ್ರ ತಯಾರಿಸುವ ಕೆಲಸ ನಿರ್ವಹಿಸುತ್ತಾರೆ. ಆದರೆ ಇವರು ಮೇಲಿನವರು ಮಾಡುವಂತ ಕೆಲಸ ಮಾಡಲಾರರು. ಅದಕ್ಕೆ ತಕ್ಕಂತೆ ಮೇಲಿನ ಕೆಲಸ ಮಾಡುವವರು ಕೃಷಿಸಂಬಂಧಿ ಉಪಕರಣಗಳನ್ನು ತಯಾರಿಸುವುದಿಲ್ಲ. ಒಟ್ಟಾರೆ ಇವರು ತಮ್ಮಲ್ಲಿರುವ ಕಲೆಯನ್ನು ಕಟ್ಟಿಗೆಗಳಲ್ಲಿ ಪ್ರದರ್ಶಿಸುತ್ತಾರೆ. ಈ ಹಿಂದೆ ಇಂತಹ ವೃತ್ತಿ ಮಾಡುವವರು ಕೆಲಸ ಮಾಡಿ ಧಾನ್ಯದ ರೂಪದಲ್ಲಿ ಕೂಲಿಯನ್ನು ಪಡೆಯುತ್ತಿದ್ದರು. ಆದರೆ ಇಂತಹ ಉದಾಹರಣೆಗಳು ಈಗ ಸಿಗುವುದಿಲ್ಲ.

ಕೂಡ್ಲಿಗಿಯಲ್ಲಿನ ಬೇಡ ಸಮುದಾಯದ ಈ ವೃತ್ತಿ ಅನುಸರಿಸುವ ವ್ಯಕ್ತಿಗಳು ತಯಾರಿಸುವ ವಿವಿಧ ರೀತಿಯ ಹೊಸ ರೀತಿಯ ಉಪಕರಣಗಳು ಬಾಗಿಲು, ಶೋಕೇಸ್‌ಗಳನ್ನು ಕಾಣಬಹುದಾಗಿದೆ. ಇವರಲ್ಲಿ ಇತರೆ ಸಮುದಾಯದ ಜನರು ಬಂದು ಕೆಲಸ ಮಾಡಿ ಕೂಲಿ ಪಡೆದುಕೊಳ್ಳುತ್ತಾರೆ. ಜೊತೆಗೆ ಕೆಲಸವನ್ನು ಕಲಿತುಕೊಳ್ಳುತ್ತಾರೆ. ಈ ವೃತ್ತಿ ಅನುಸರಿಸುವ ಸುಮಾರು ಕುಟುಂಬಗಳು ಈ ಊರಿನಲ್ಲಿ ಕಂಡುಬರುತ್ತವೆ.

ಅವರು ತಮ್ಮ ಜೀವನ ನಿರ್ವಹಣೆಗಾಗಿ ಇದನ್ನು ಸಂಪೂರ್ಣವಾಗಿ ಅವಲಂಬಿಸಿದ್ದಾರೆ. ಜೊತೆಗೆ ಈ ಕೆಲಸಕ್ಕೆ ಬೇಕಾದ ಕಟ್ಟಿಗೆ ಒದಗಿಸುವ ಕೆಲಸವನ್ನು ಕೆಲವರು ಮಾಡುತ್ತಿರುವುದು ಕಂಡುಬರುತ್ತದೆ.

**ಕೂಲಿ ಕೆಲಸಕ್ಕಾಗಿ ವಲಸೆ**

ಬರಗಾಲದ ಪರಿಸ್ಥಿತಿಯಿಂದಾಗಿ ಊರಿನಲ್ಲಿ ಮಾಡಲು ಯಾವ ಕೂಲಿಕೆಲಸಗಳು ಸಿಗದಿದ್ದಾಗ ಇಲ್ಲಿನ ಅನೇಕ ಜನ ಕೂಲಿ ಕೆಲಸಗಾರರು ಕೂಲಿಗಾಗಿ ಬೇರೆ ಕಡೆ ಕೆಲವು ದಿನಗಳ ಮಟ್ಟಿಗೆ ವಲಸೆ ಹೋಗುವುದನ್ನು ಕಾಣುತ್ತೇವೆ. ಇಲ್ಲಿನ ಹಲವಾರು ಜನರು ಒಂದೆಡೆ ಸೇರಿ ಕಾಫಿ ಎಸ್ಟೇಟ್‌ಗಳಿಗೆ ಹೋಗಿ ಅಲ್ಲಿ ಸ್ವಲ್ಪದಿನಗಳವರೆಗೆ ಇದ್ದು ಕೂಲಿ ಕೆಲಸ ಮಾಡಿ ಬಂದ ಹಣವನ್ನು ಕೂಡಿಟ್ಟುಕೊಂಡು ನಂತರ ತಮ್ಮ ಊರಿಗೆ ಹಿಂದಿರುಗುತ್ತಾರೆ. ಈ ಕೆಲಸಕ್ಕಾಗಿ ಕೆಲವರು ತಮ್ಮ ಮನೆಯಲ್ಲಿನ ಹೆಂಡತಿ, ಮಕ್ಕಳು ಮರಿಗಳನ್ನು ಕರೆದುಕೊಂಡು ಹೋಗುತ್ತಾರೆ. ಕೆಲವು ದಿನಗಳ ಮಟ್ಟಿಗೆ ಅವರ ಮನೆಗಳಿಗೆ ಬೀಗ ಹಾಕಿರುವ ದೃಶ್ಯಗಳು ಕಂಡುಬರುತ್ತವೆ. ಇದು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕೆಲವು ಜನರು ಮಾಡುವ ಕೆಲಸವಾಗಿದೆ. ಇವರ ಜೊತೆಗೆ ಲಂಬಾಣಿ, ಹರಿಜನ ಮೊದಲಾದ ಸಮುದಾಯದವರು ಹೋಗುತ್ತಾರೆ.

**ಇತರೆ**

ಇಲ್ಲಿನ ಬೇಡರು ತಮ್ಮ ಜೀವನಕ್ಕಾಗಿ ಇತರೆ ಕೆಲಸಗಳನ್ನು ನಿರ್ವಹಿಸುತ್ತಿದ್ದಾರೆ. ಇದರಲ್ಲಿ ಹಲವಾರು ಹಮಾಲಿಗಳಾಗಿದ್ದಾರೆ. ಕೆಲವರು ಡಾಂಬರಿನ ಕೆಲಸಕ್ಕೆ ಹೋಗುತ್ತಾರೆ. ಇನ್ನೂ ಕೆಲವರು ಕೆರೆಗಳಲ್ಲಿ ಹೂಳೆತ್ತಲು ಹೋಗುವ ಪ್ರಸಂಗಗಳು ಇವೆ. ಇದರಲ್ಲಿ ಮಹಿಳೆ ಹಾಗೂ ಮಕ್ಕಳ ಪಾಲು ಇದೆ.

ಕೃಷಿ ಹಾಗೂ ಕೃಷಿಯೇತರ ಕೆಲಸಗಳಲ್ಲಿ ಬಾಲಕಾರ್ಮಿಕರು ಈ ಸಮುಯದದಲ್ಲಿ ಇರುವುದು ಕಂಡುಬರುತ್ತದೆ. ಇಂತಹ ಮಕ್ಕಳು ವಿವಿಧ ರೀತಿಯ ಕೂಲಿಕೆಲಸ ನಿರ್ವಹಿಸುತ್ತಾರೆ. ಇವರು ಮನೆಕಟ್ಟುವ ಕೆಲಸ, ಕಿರಾಣಿ ಅಂಗಡಿ, ಹೋಟೆಲ್ ಗಳಲ್ಲಿ ಮೊದಲಾದ ಕಡೆಗಳಲ್ಲಿ ಇವರ ಸಂಖ್ಯೆ ಹೆಚ್ಚಿದೆ. ಇದಕ್ಕೆ ಒಂದು ರೀತಿಯಲ್ಲಿ ಬಡತನವೇ ಕಾರಣವೆಂದು ಹೇಳಬಹುದು.

**ವ್ಯಾಪಾರ**

ವ್ಯಾಪಾರ ಎಂಬುದು ಎಲ್ಲೆಂದರಲ್ಲಿ ಪಸರಿಸಿರುವ ಹಾಗೂ ಎಲ್ಲರಿಂದಲೂ ಯಾವುದೋ ಒಂದು ರೂಪದಿಂದ ದಿನನಿತ್ಯ ನಡೆಯುತ್ತಲೇ ಇರುತ್ತದೆ. ಈ ಮೊದಲೇ ನಮೂದಿಸಿರುವ ವೃತ್ತಿಗಳನ್ನು ಹೊರತುಪಡಿಸಿ ಕೂಡ್ಲಿಗಿ ನಗರದ ಬೇಡರು ವಿವಿಧ ರೀತಿಯ ವ್ಯಾಪಾರಗಳನ್ನು ಮಾಡುತ್ತಾರೆ. ಇಂದು ತಮ್ಮ ಆರ್ಥಿಕ ಸುಧಾರಣೆಗಾಗಿ ಬೇಡರು ವ್ಯಾಪಾರ ಕ್ಷೇತ್ರವನ್ನು ಸಹ ಆಯ್ಕೆ ಮಾಡಿಕೊಂಡಿದ್ದಾರೆ. ಬಹಳಷ್ಟು ಕುಟುಂಬಗಳು ಇಂದು ವ್ಯಾಪಾರವನ್ನೇ ಅವಲಂಬಿಸಿವೆ. ವ್ಯಾಪಾರದಲ್ಲಿಯೂ ಸಹ ನಾವು ವೈಶ್ಯರಿಗಿಂತ ಕಡಿಮೆಯೇನಲ್ಲ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಕೂಡ್ಲಿಗಿಯಲ್ಲಿ ಕೆಲವು ಅಂಗಡಿಗಳು ಬೇಡರ ಸಮುದಾಯಕ್ಕೆ ಸೇರಿದವುಗಳಾಗಿವೆ. ಒಂದು ಕಾಲದಲ್ಲಿ ಕೇವಲ ಕಾಡಿನಲ್ಲಿ ಅಲೆದು ಜೀವನಸಾಗಿಸುತ್ತಿದ್ದ ಹಾಗೂ ತನ್ನಲ್ಲಿ ವ್ಯವಹಾರಿಕ ಜ್ಞಾನವೂ ಇಲ್ಲದ ಈ ಜನ ಇಂದು ಈ ಕ್ಷೇತ್ರದಲ್ಲಿ ಉನ್ನತಿ ಪಡೆದಿದ್ದಾರೆ. ಕೆಲವು ಜನರು

ಬಟ್ಟೆವ್ಯಾಪಾರ ಮಾಡಿ ಅದರಲ್ಲಿ ಲಾಭಗಳಿಸಿ ದೊಡ್ಡ ದೊಡ್ಡ ಬಟ್ಟೆ ಅಂಗಡಿಗಳನ್ನು ಹೊಂದಿದ್ದಾರೆ. ಇದರಂತೆ ಸುತ್ತಮುತ್ತಲಿನ ಊರಿನಲ್ಲಿ ನಡೆಯುವ ಸಂತೆಗಳಲ್ಲಿ ತರಕಾರಿ ವ್ಯಾಪಾರ ಮಾಡಲು ಹೋಗುತ್ತಾರೆ. ಇದರಿಂದಲೂ ತಮ್ಮ ಉಪಜೀವನವನ್ನು ಸಾಗಿಸುತ್ತಿದ್ದಾರೆ. ಇಂತಹ ಪರಿಸ್ಥಿತಿಗಳ ಮಧ್ಯೆ ಬಡತನದಿಂದ ಬಳಲುತ್ತಿರುವ ಕೆಲವು ಜನರು ಹತ್ತಿರದ ಕಾಡಿನಲ್ಲಿ ದೊರೆಯುವ ಸೀತಾಫಲ, ಬಿಕ್ಕೆಹಣ್ಣು ಮೊದಲಾದ ಹಣ್ಣು ಹಂಪಲಗಳನ್ನು ಮಾರಾಟಮಾಡಿ ಜೀವನವನ್ನು ನಡೆಸುತ್ತಿದ್ದಾರೆ.

ಹುಣಸೆಹಣ್ಣಿನ ವ್ಯಾಪಾರ, ಕೂಡ್ಲಿಗಿ ತಾಲೂಕಿನ ಸುತ್ತಮುತ್ತ ಹುಣಸೆ ಮರಗಳು ಹೇರಳವಾಗಿರುವುದರಿಂದ ಬರಗಾಲದಂತಹ ಕಾಲಗಳಲ್ಲಿ ಇದರ ವ್ಯಾಪಾರ ಸಾಕಷ್ಟು ಕುಟುಂಬಗಳಿಗೆ ಅನ್ನ ನೀಡುತ್ತಿದೆ. ಇಲ್ಲಿ ಬೆಳೆದ ಹುಣಸೆಹಣ್ಣು ಆಂಧ್ರಪ್ರದೇಶದ ಹೈದರಾಬಾದ್ ವರೆಗೂ ಹೋಗುತ್ತದೆ. ಇದರಿಂದ ಸಾಕಷ್ಟು ಜನರಿಗೆ ಕೂಲಿ ಕೆಲಸ ದೊರಕುತ್ತದೆ. ಸುತ್ತ ದೊರಕುವ ಹುಣಸೆಹಣ್ಣನ್ನು ತಂದು ಅದನ್ನು ಬಿಸಿಲಿನಲ್ಲಿ ಒಣಗಿಸಿ ಮೇಲಿನ ಸಿಪ್ಪೆ ತೆಗೆದು ಅದನ್ನು ಚಚ್ಚಿ ತೊಳೆತೆಗೆದು ಪುಟ್ಟಿಗಳಲ್ಲಿ ತುಂಬಿಕೊಂಡು ಹೊಸಪೇಟೆ ಮಾರುಕಟ್ಟೆಗೆ ತರುತ್ತಾರೆ. ಈ ವ್ಯಾಪಾರ ಕೇವಲ ೩ - ೪ ತಿಂಗಳು ಕಾಲ ಮಾತ್ರ ಇರುತ್ತದೆ. ಇದನ್ನು ಮಾಡುವವರು ಹೆಚ್ಚಾಗಿ ಬೇಡರೇ. ಇದೂ ಕೂಡ ತುಂಬಾ ಕಷ್ಟದ ಕೆಲಸವಾಗಿರುವುದರಿಂದ ಬೇಡರೇ ಮರಗಳನ್ನು ಹತ್ತಿ ಹಣ್ಣನ್ನು ಹರಿದುಕೊಂಡು ಮನೆಗೆ ತಂದುಹಾಕುವ ಕೆಲಸ ಮಾಡುತ್ತಿದ್ದಾರೆ. ಒಂದು ಕಾಲದಲ್ಲಿ ಬೇಟೆಯಾಡಲು ಬಿಲ್ಲು, ಬಾಣ, ಭರ್ಚಿಗಳನ್ನು ಹಿಡಿದ ಇವರ ಕೈಯಲ್ಲಿ ಈ ಮೂರುತಿಂಗಳು ಬಿದಿರಿನ ಜೋಟಿಗಳು ರಾರಾಜಿಸುತ್ತವೆ. ಈ ವ್ಯಾಪಾರದಿಂದಾಗಿ ಹಲವು ಜನರು ಜೀವನ ಸಾಗಿಸುತ್ತಿದ್ದಾರೆ. ಇದಲ್ಲದೆ ಕೆಲವು ಜನರು ಈ ಪ್ರದೇಶದಲ್ಲಿ ಜೀವನೋಪಾಯಕ್ಕಾಗಿ ಇತರೆ ವ್ಯಾಪಾರಗಳನ್ನು ಮಾಡುತ್ತಿದ್ದಾರೆ. ಕೆಲವರು ಹೋಟೆಲುಗಳನ್ನು ನಡೆಸುತ್ತಿದ್ದಾರೆ. ಇನ್ನೂ ಕೆಲವರು ಲಿಕ್ಕರ್ ಶಾಪ್ ಮೊದಲಾದ ಮದ್ಯದ ವಹಿವಾಟನ್ನು ಮಾಡುತ್ತಿರುವರು.



ಇನ್ನೊಂದು ವಿಷಯವೆಂದರ ಇಲ್ಲಿನ ಬೇಡರು ಕೆಲವು ವ್ಯಕ್ತಿಗಳು ಮಾಂಸದ ಮಾರಾಟವನ್ನು ಕೂಡ ಮಾಡುತ್ತಿದ್ದಾರೆ. ಅದರಲ್ಲಿ ಕೆಲವರು ಕುರಿ, ಕೋಳಿ, ಮಾಂಸವನ್ನು ಮಾರಾಟ ಮಾಡಿದರೆ ಕೆಲವರು ಈ ವ್ಯವಹಾರಕ್ಕಾಗಿ ದನ, ಕುರಿ, ಕೋಳಿಗಳನ್ನು ಪೂರೈಸುವ ವ್ಯಾಪಾರವನ್ನು ಮಾಡುತ್ತಿದ್ದಾರೆ. ಇಂತಹ ಹಲವು ಕೆಲಸ, ವ್ಯಾಪಾರಗಳಲ್ಲಿ ಎರಡು ಪಂಗಡದವರ ಪಾಲು ಸಮನಾಗಿದೆ. ಕೆಲವು ಜನ ತಮ್ಮ ಮನೆಗಳ ಹತ್ತಿರವೇ ಸಣ್ಣಪುಟ್ಟ ಪೆಟ್ಟಿಗೆ ಅಂಗಡಿಗಳನ್ನು ಇಟ್ಟುಕೊಂಡರೆ ಇನ್ನೂ ಕೆಲವರು ಆಹಾರ ಧಾನ್ಯಗಳ ವ್ಯಾಪರವನ್ನು ಸಹ ನಿರ್ವಹಿಸುತಲಿದ್ದಾರೆ. ದೂರವಾಣಿ, ಪುಸ್ತಕಾಲಯ ಇಂತಹ ಹಲವಾರು ವ್ಯಾಪಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ವ್ಯಾಪಾರದಿಂದ ಕೆಲವರು ಆರ್ಥಿಕವಾಗಿ ಬೆಳವಣಿಗೆ ಹೊಂದಿದ್ದಾರೆ. ಈ ರೀತಿ ವಿವಿಧ ವ್ಯವಹಾರ ನಡೆಸುವ ಇವರು ಬ್ಯಾಂಕು, ಸರ್ಕಾರಿ ಯೋಜನೆಗಳ ಲಾಭ ಪಡೆದುಕೊಳ್ಳುವ ಪ್ರಜ್ಞೆ ಹೊಂದಿದ್ದಾರೆ. ಸದ್ಯ ಕೂಡ್ಲಿಗಿ ಪಟ್ಟಣದಲ್ಲಿ ಇವರು ತುಂಗಭದ್ರಾ ಗ್ರಾಮೀಣ ಬ್ಯಾಂಕ್, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬಿ.ಡಿ.ಸಿ.ಸಿ.ಬ್ಯಾಂಕ್, ವ್ಯವಸಾಯ ಸೇವಾ ಸಹಕಾರ ಸಂಘ ಇಂತಹ ಅನೇಕ ಕಡೆಗಳಿಂದ ವ್ಯಾಪಾರಕ್ಕಾಗಿ ಸಾಲ ಪಡೆಯುತಲಿದ್ದಾರೆ. ಅದರಂತೆ ಸುಶಿಕ್ಷಿತ ಯುವಕರು ಸಮಾಜಕಲ್ಯಾಣ ಇಲಾಖೆಯಿಂದ ಬರುವ ವಿವಿಧ ತರಬೇತಿ, ಧನಸಹಾಯಗಳನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

ಬ್ಯಾಂಕುಗಳಿಂದ ಹಾಗೂ ಇತರೆ ಹಣಕಾಸಿನ ಸಂಘ ಸಂಸ್ಥೆಗಳಿಂದ ಇಲ್ಲಿನ ಬೇಡ ಸಮುದಾಯದವರು ಕೃಷಿ, ವ್ಯಾಪಾರ ಇತ್ಯಾದಿಗಳಿಗಾಗಿ ಸಾಲ ಪಡೆದುಕೊಳ್ಳುವ ಪದ್ಧತಿ ಇದೆ. ಸಾಕಷ್ಟು ಪ್ರಮಾಣದಲ್ಲಿ ಇಲ್ಲಿಂದ ಹಣವನ್ನು ಪಡೆದುಕೊಂಡು ವ್ಯಾಪಾರದಲ್ಲಿ ಹಾಗೂ ಇತರೆ ಕೆಲಸಗಳಲ್ಲಿ ಪ್ರಗತಿ ಸಾಧಿಸಿದ್ದಾರೆ. ಈ ಊರಿನ ಬೇಡ ಸಮುದಾಯದ ಮಹಿಳೆಯರು ಕೂಡ ಕೆಲವು ವ್ಯಾಪಾರ ನಡೆಸುವುದನ್ನು ನೋಡಬಹುದಾಗಿದೆ. ಅದರಲ್ಲಿ ಕೆಲವು ಜನ ಸಂತೆಗಳಲ್ಲಿ ತರಕಾರಿ ವ್ಯಾಪಾರ ಮಾಡುತ್ತಿದ್ದಾರೆ. ಹಾಗೂ ಇತರೆ ತೀರಾ ಬಡತನದಿಂದ ಜೀವಿಸುವ ಕುಟುಂಬಗಳ ಮಹಿಳೆಯರು ದೂರದ ಕಾಡುಗಳಿಗೆ ಹೋಗಿ ಅಲ್ಲಿ ಸಿಗುವ ಹಲವು ಬಗೆಯ ಹಣ್ಣು ಕಾಯಿಗಳನ್ನು ತಂದು ಮಾರಾಟ ಮಾಡಿ ಜೀವನ ಸಾಗಿಸುತ್ತಾರೆ. ಇನ್ನೂ ಕೆಲವು ಕುಟುಂಬಗಳು ಕಾಡಿನಲ್ಲಿರುವ ಮುತ್ತುಗದ ಎಲೆಗಳನ್ನು ತಂದು ಅವುಗಳನ್ನು ಒಣಗಿಸಿ ಊಟದ ಎಲೆಗಳನ್ನು ತಯಾರಿಸಿ ಅವುಗಳನ್ನು ಮಾರಾಟ ಮಾಡುವ ಮೂಲಕವಾಗಿ ತಮ್ಮ ಉಪಜೀವನ ಸಾಗಿಸುತ್ತಿದ್ದಾರೆ. ಇಂತಹ ಕುಟುಂಬಗಳಿಗೆ ಇಲ್ಲಿ ಯಾವುದೇ ಬ್ಯಾಂಕು, ಹಣಕಾಸಿನ ಸಂಸ್ಥೆ ಸಾಲ ಯೋಜನೆ ಮಾಡಿಕೊಡಲಾರವು ಇವರ ಮಕ್ಕಳು ಸಹ ಇಂತಹ ಪರಿಸ್ಥಿತಿಗಳಲ್ಲಿ ಶಾಲೆಗೆ ಹೋಗಿ ಶಾಲೆಯಿಂದ ಬಂದನಂತರ ಈ ಕೆಲಸಗಳಲ್ಲಿ ನೆರವಾಗುತ್ತಾರೆ. ಬಡತನಕ್ಕಾಗಿ ಇಂತಹ ವೃತ್ತಿ ಅವಲಂಬಿಸಿರುವಂತಹ ಇಂತಹ ಕುಟುಂಬಗಳಲ್ಲಿನ ಎಷ್ಟೋ ಮಕ್ಕಳು ಅರ್ಧದಲ್ಲೇ ಶಿಕ್ಷಣವನ್ನು ಮೊಟಕುಗೊಳಿಸಿಕೊಂಡಿದ್ದಾರೆ.

### ಸರ್ಕಾರಿ ಹುದ್ದೆಗಳು

ಕೂಡ್ಲಿಗಿಯ ಬೇಡ ಸಮುದಾಯದಲ್ಲಿ ಇಂದು ಸಾಕಷ್ಟು ಜನರು ಸುಶಿಕ್ಷಿತರಾಗಿದ್ದಾರೆ. ಇದಕ್ಕೆ ತಕ್ಕಂತೆ ಹಲವು ಸರ್ಕಾರಿ ಹುದ್ದೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಬೇರೆ ಬೇರೆ ಸ್ಥಳಗಳಲ್ಲಿ ವಿವಿಧ ಕಛೇರಿಗಳಲ್ಲಿ ನೌಕರಿ ಮಾಡುತ್ತಿರುವುದು ಕಂಡುಬರುತ್ತದೆ. ಪಟ್ಟಣಪಂಚಾಯ್ತಿ, ಕೋರ್ಟು, ಪೋಲೀಸ್, ಬ್ಯಾಂಕು, ಶಾಲೆ, ಕಾಲೇಜು, ಸಾರಿಗೆ, ಸೇನೆ ಇತ್ಯಾದಿ ಸರ್ಕಾರಿ ಕಛೇರಿಗಳಲ್ಲದೆ ಸರ್ಕಾರೇತರ ಸಂಘ ಸಂಸ್ಥೆಗಳಲ್ಲಿಯೂ ಸಹ ವಿವಿಧ ಹುದ್ದೆಗಳನ್ನು ಅಲಂಕರಿಸಿದ್ದಾರೆ.

ಒಟ್ಟಾರೆ ಇಲ್ಲಿನ ಬೇಡ ಸಮುದಾಯದವರು ತಮ್ಮ ಜೀವನ ನಿರ್ವಹಣೆ ಹಾಗೂ ಆರ್ಥಿಕ ಕ್ಷೇತ್ರದ ಅಭಿವೃದ್ಧಿಯಲ್ಲಿ ಮಹತ್ವದ ಹೆಜ್ಜೆ ಇರಿಸಿದ್ದಾರೆ. ಆದರೆ ತೀರಾ ಹಿಂದುಳಿದ ಬಡತನ ರೇಖೆಗಿಂತ ಕೆಳಗೆ ವಾಸಿಸುವ ಕುಟುಂಬಗಳೂ ಇವೆ ಎಂಬುದನ್ನು ಮರೆಯುವ ಹಾಗಿಲ್ಲ. ಇವರು ಬಡತನವನ್ನು ಮರೆಮಾಚಿಕೊಳ್ಳಲು ತಮ್ಮ ಮಕ್ಕಳನ್ನು ಶಾಲೆ ಬಿಡಿಸಿ ವಿವಿಧ ಕೆಲಸಗಳಿಗೆ ಕಳಿಸುವ ಸಾಕಷ್ಟು ಉದಾಹರಣೆಗಳು ಇವೆ. ಇನ್ನು ಇವರ ಜೀವನ ಸುಧಾರಿಸಲು ಅದೆಷ್ಟು ದಿನಗಳು ಬೇಕಾಗುತ್ತದೆ ಎಂಬುದನ್ನು ಕಾದು ನೋಡಬೇಕಾಗಿದೆ. ಜೊತೆಗೆ ಉನ್ನತ ಶಿಕ್ಷಣ ಪಡೆದ ಹಲವು ನಿರುದ್ಯೋಗಿ ಯುವಕರು ಇಲ್ಲಿದ್ದಾರೆ. "ಬಡತನದ ಬೇಗೆಯಲ್ಲಿ ನರಳುತ್ತಿರುವ ಜನಾಂಗ ಇದು. ಅತ್ತ ಬೇಟೆಯಾಡಿ ಬದುಕುವ ಅವಕಾಶಗಳಿಲ್ಲದೆ ಇತ್ತ ದುಡಿದು ಸ್ವತಂತ್ರವಾಗಿ ಬದುಕೋಣ ಎಂದರೆ ಹೊಲಗದ್ದೆಗಳಿಲ್ಲದೆ ಕೂಲಿ ನಾಲಿ ಮೇಲೆ ಜೀವನ ನಡೆಸಿಕೊಂಡಿರ ಬೇಕಾಗಿದೆ. ಅಲ್ಲದೆ ಇವರು ಬದುಕುತ್ತಿರುವುದು ಮಳೆ ಒಂದು ದೂರದ ಕನಸಾಗಿರುವಂತಹ ತಾಲೂಕುಗಳಲ್ಲಿ ಹಾಗಾಗಿ ಹಿಂದುಳಿದ ಪ್ರದೇಶಗಳಲ್ಲಿ ಬದುಕುವ ಇವರು ಇನ್ನು ಹಿಂದುಳಿದವರಾಗಿದ್ದಾರೆ."[೪]

**ಸ್ವ ಸಹಾಯ ಗುಂಪುಗಳು**

ಆಧುನಿಕ ಸಮಾಜದಲ್ಲಿ ಮಹಿಳೆ ವಿವಿಧ ಕ್ಷೇತ್ರಗಳಲ್ಲಿ ಉನ್ನತಿ ಸಾಧಿಸಿದ್ದಾಳೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮಹಿಳಾ ಶೋಷಣೆ ವಿರುದ್ಧ ಚಳುವಳಿ ಹೋರಾಟ ಸತತವಾಗಿ ಮುಂದುವರೆದಿದ್ದು, ಆ ನಿಟ್ಟಿನಲ್ಲಿ ಸರ್ಕಾರ, ಸಂಘಸಂಸ್ಥೆಗಳು, ಸ್ತ್ರೀವಾದಿ ಚಿಂತಕರು ಅನೇಕ ಯೋಜನೆಗಳನ್ನು ರೂಪಿಸಿಕೊಂಡಿದ್ದಾರೆ. ಇಂತಹ ಪರಿಸ್ಥಿತಿಯಲ್ಲೂ ಗ್ರಾಮೀಣಪ್ರದೇಶದಲ್ಲಿನ ಕೆಲವು ಮಹಿಳೆಯರು ದೂರ ಉಳಿದು ಬಿಟ್ಟಿರುವುದು ಸಾಮಾನ್ಯವಾದ ಸಂಗತಿ. ''ಇಂತಹ ಸಂದರ್ಭದಲ್ಲಿ ಸ್ವ ಸಹಾಯ ಗುಂಪುಗಳ ಪ್ರವೇಶ ಭಾರತದ ಬಡತನ ರೇಖೆಯ ಕೆಳಗೂ ಗ್ರಾಮೀಣ ಮಹಿಳೆಯರಿಗೆ ನವ ಚೈತನ್ಯದ ಜಗತ್ತೊಂದರ ಪರಿಚಯವನ್ನು ಮಾಡಿಕೊಡುವಲ್ಲಿ ಯಶಸ್ವಿಯಾಯಿತು.''[೫] ಇಂತಹ ಸ್ವ ಸಹಾಯ ಗುಂಪುಗಳು ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿ ಉತ್ತಮಪಡಿಸಿ ಕೊಳ್ಳಲು ಸಹಕಾರಿಯಾಗಿವೆ. ಆರ್ಥಿಕ ಹಾಗೂ ಸಾಮಾಜಿಕ ಸಮಾನ ಮನಸ್ಕ ಮಹಿಳೆಯರು ಚಿಕ್ಕ ಚಿಕ್ಕ ಗುಂಪುಗಳನ್ನು ಸ್ವ ಇಚ್ಛೆಯಿಂದ ರಚಿಸಿಕೊಂಡು ಸಂಘಟಿತರಾಗಿ ಚಿಕ್ಕ ಉಳಿತಾಯ ಮತ್ತು ಅಗತ್ಯಕ್ಕೆ ತಕ್ಕಂತೆ ಸಣ್ಣ ಸಾಲಗಳು ಸರಳ ಬಡ್ಡಿ ದರಗಳ ಮೂಲಕ ತನ್ನ ನಿಲುಕುವ ವ್ಯಾಪ್ತಿಯಲ್ಲಿ ದುಡಿಮೆಯ ದಾರಿಯಲ್ಲಿ ಮುನ್ನಡೆವ ಉದ್ದೇಶವನ್ನು ಸಾಕಾರಗೊಳಿಸುವಲ್ಲಿ ಸ್ವ ಸಹಾಯ ಗುಂಪಿನ ಪಾತ್ರ ಮಹತ್ವದ್ದಾಗಿದೆ.

ಕೂಡ್ಲಿಗಿ ತಾಲೂಕು ವ್ಯಾಪ್ತಿಯಲ್ಲಿ ಇಂತಹ ಸ್ವ ಸಹಾಯ ಗುಂಪುಗಳು ಹೆಚ್ಚಾಗಿ ಕಂಡುಬರುತ್ತವೆ. ಇಲ್ಲಿ ಹಲವಾರು ಸರ್ಕಾರದ ಯೋಜನೆ ಅಡಿಯಲ್ಲಿ ಹಾಗೂ ಸರ್ಕಾರೇತರ ಸಂಸ್ಥೆಗಳ ವ್ಯಾಪ್ತಿಯಲ್ಲಿ ಹಲವು ಸ್ವ ಸಹಾಯ ಸಂಘಗಳಿವೆ. ಇವುಗಳಲ್ಲಿ ಮಹಿಳಾ ಸಮಖ್ಯಾ I.D.P.M.S. D.P.G. S.J.S.R.Y. ಲಾರ್ಡ್ಸ್, ಸ್ನೇಹ, ಸ್ಪಂದನ ಇತ್ಯಾದಿಗಳಿವೆ. ಕೂಡ್ಲಿಗಿ ಪಟ್ಟಣದಲ್ಲಿ ಸರ್ಕಾರಿ ಯೋಜನೆ ಅಡಿಯಲ್ಲಿ ಸ್ಥಾಪಿತವಾದ S.J.S.R.Y. ವತಿಯಿಂದ ಐದು ಗುಂಪುಗಳಿರುವುದು ಕಂಡುಬರುತ್ತದೆ. ಇನ್ನುಳಿದ N.G.O. ವ್ಯಾಪ್ತಿಯಲ್ಲಿ ಬರುವ ಸ್ವ ಸಹಾಯ ಗುಂಪುಗಳು ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಈ ಯೋಜನೆ ಹಲವಾರು ಉದ್ದೇಶಗಳನ್ನು ಹೊಂದಿದೆ. ಮಾರ್ಗದರ್ಶನ, ತರಬೇತಿ, ಸಾಲದಹಣ ಒದಗಿಸಿಕೊಡುವಿಕೆ, ಮಾರುಕಟ್ಟೆ ಒದಗಿಸುವಿಕೆ ಹಾಗೂ ದುಡಿಮೆ ಹೆಚ್ಚಿಸುವಲ್ಲಿ ಸಹಕಾರ ನೀಡುವುದು ಇತ್ಯಾದಿಗಳೇ ಆಗಿವೆ. ಇಂತಹ ಹಲವು ಗುಂಪುಗಳಲ್ಲಿ ಅರ್ಧಕ್ಕಿಂತ ಹೆಚ್ಚು ಸದಸ್ಯರ ಸಂಖ್ಯೆ ಬೇಡ ಸಮುದಾಯದ ಮಹಿಳೆಯರೇ ಇರುವುದು ವಿಶೇಷತೆ. ಇಂತಹ ಗುಂಪುಗಳು ವಾರ ಅಥವಾ ೧೫ ದಿವಸಕ್ಕೊಮ್ಮೆ ಸದಸ್ಯರೆಲ್ಲರು ಸೇರಿ ತಮ್ಮ ಉಳಿತಾದಯ ಮೊತ್ತವನ್ನು ಕೂಡಿಸುವುದು ಆ ಬಂಡವಾಳವನ್ನು ಅಗತ್ಯಕ್ಕೆ ತಕ್ಕಂತೆ ವಿನಿಯೋಗಿಸುವ ದುಡಿಸುವ ಮತ್ತು ಅಲ್ಪ ಬಡ್ಡಿಯೊಂದಿಗೆ ನಿಗದಿತ ಸಮಯಕ್ಕೆ ಹಿಂತಿರುಗಿಸುವ ನೀತಿ ನಿಯಮಗಳನ್ನು ತಾವೇ ರೂಢಿಸಿಕೊಳ್ಳುತ್ತಾರೆ. ಅಗತ್ಯಬಿದ್ದಲ್ಲಿ ಗುಂಪಿನ ಸದಸ್ಯೇತರರಿಗೂ ಸಾಲ ನೀಡಿ ನಿಗದಿತ ಸಮಯದಲ್ಲಿ ವಸೂಲಿ ಮಾಡಿಕೊಳ್ಳುತ್ತಾರೆ. ಇದರಿಂದ ಪ್ರತಿಯೊಂದು ಗುಂಪು ಸರಾಸರಿ ೨೦ ರಿಂದ ೩೦ ಸಾವಿರ ರೂಪಾಯಿಗಳವರೆಗೆ ಉಳಿತಾಯ ಮಾಡಿವೆ. ಇವುಗಳ ಎಲ್ಲ ವ್ಯವಹಾರಗಳು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕೂಡ್ಲಿಗಿ ಶಾಖೆಯಲ್ಲಿ ನಡೆಯುತ್ತವೆ. ಪ್ರತಿ ಗುಂಪಿಗೂ ತಮಗೆ ಸರಿ ಎನಿಸಿದ ಒಂದು ಹೆಸರನ್ನು ಇಟ್ಟುಕೊಂಡಿದ್ದಾರೆ. ಇದರಿಂದ ನಮಗೆ ತಿಳಿದುಬರುವ ವಿಷಯವೆಂದರೆ ಬೇಡ ಸಮುದಾಯದ ಸ್ತ್ರೀಯರಲ್ಲಿ ಆದ ಬದಲಾವಣೆ. ಒಂದು ಕಾಲದಲ್ಲಿ ಕೇವಲ ನಾಲ್ಕು ಗೋಡೆಗಳ ಮಧ್ಯೆ ಬದುಕಿದ ಬೇಡರ ಮಹಿಳೆ ಕೂಲಿ ಮಾಡಿ ಅಥವಾ ದುಡಿದು ತಂದ ಹಣವನ್ನು ಅಂದಿನ

ದಿನದ ಖರ್ಚಿಗೆ ಮಾತ್ರ ಬಳಸಿ ಮುಂದಿನ ದಿನಗಳ ಬಗ್ಗೆ ಚಿಂತಿಸದೆ ಅದಕ್ಕಾಗಿ ಬೇರೆಯವರಿಂದ ಸಾಲ ಮಾಡಿ ಸಾಲದ ಹೊರೆಯಿಂದ ನರಳುತ್ತಿದ್ದಳು. ಆದರೆ ಇಂದು ತನ್ನ ಆರ್ಥಿಕ ಬದುಕಿನಲ್ಲಿ ಸ್ವಾವಲಂಬನೆ ಸಾಧಿಸಿ ತನ್ಮೂಲಕ ಒಂದು ಕುಟುಂಬದ ಜೊತೆಗೆ ಒಂದು ಸಂಘದ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಮಟ್ಟಿಗೆ ಬೆಳೆದು ನಿಂತಿದ್ದಾಳೆ. ಇದರಲ್ಲಿ ಜಾತಿ, ಜನಾಂಗದ ಭೇದವಿಲ್ಲದೆ ಪರಸ್ಪರ ಸಹೋದರಿಯರಂತೆ ವರ್ತಿಸಿ ಐಕ್ಯತೆಗೆ ಪ್ರತೀಕವಾಗಿದ್ದಾಳೆ.

ಕೂಡ್ಲಿಗಿ ಪಟ್ಟಣದಲ್ಲಿ ಸ್ವರ್ಣಜಯಂತಿ ಶಹರಿ ರೋಜಗಾರ್ ಯೋಜನೆ ಅಡಿಯಲ್ಲಿ ಸ್ಥಾಪಿತವಾದ ಸ್ವ ಸಹಾಯ ಗುಂಪುಗಳ ವಿವರ ಈ ಮುಂದಿನಂತೆ ಇದೆ.

**ಕೂಡ್ಲಿಗಿ ಪಟ್ಟಣದಲ್ಲಿನ ಸ್ವಸಹಾಯ ಗುಂಪುಗಳ ವಿವರ**

(ಸ್ವರ್ಣಜಯಂತಿ ಶಹರಿ ರೋಜಗಾರ್ ಯೋಜನೆ)

| ಕ್ರ. ಸಂ. | ಸಂಘಗಳ ಹೆಸರು | ಸದಸ್ಯರ ಒಟ್ಟು ಸಂಖ್ಯೆ | ಬುಡಕಟ್ಟು ಸದಸ್ಯರ ಸಂಖ್ಯೆ (S.T.) | ವಾರ್ಡ್ ಸಂಖ್ಯೆ | ಉಳಿತಾಯ ಹಣ ಒಟ್ಟು ರೂ.ಗಳಲ್ಲಿ | ಯೋಜನೆಯಿಂದ ಪಡೆದ ಲಾಭದ ವಿವರ |
|---|---|---|---|---|---|---|
| ೧ | ಕಿತ್ತೂರು ಚೆನ್ನಮ್ಮ ಮಹಿಳಾ ನಿರಂತರ ಉಳಿತಾಯ ಸಂಘ | ೧೩ | ೧೦ | ೬ | ೩೦,೦೦೦.೦೦ | ಆವರ್ತಕ ನಿಧಿ ಢಾಕ್ರಾ ಗುಂಪಿನ ಸಾಲ |
| ೨. | ಪ್ರಿಯದರ್ಶಿನಿ ಮಹಿಳಾ ನಿರಂತರ ಉಳಿತಾಯ ಸಂಘ | ೧೦ | ೧೦ | ೪ | ೨೫,೦೦೦.೦೦ | ಆವರ್ತಕ ನಿಧಿ ಢಾಕ್ರಾ ಗುಂಪಿನ ಸಾಲ |
| ೩. | ತಾಯಮ್ಮ ಮಹಿಳಾ ನಿರಂತರ ಉಳಿತಾಯ ಸಂಘ | ೧೦ | ೧೦ | ೩ | ೨೮,೦೦೦.೦೦ | ಆವರ್ತಕ ನಿಧಿ ಢಾಕ್ರಾ ಗುಂಪಿನ ಸಾಲ |
| ೪. | ಶ್ರೀ ದುರ್ಗಾಶಕ್ತಿ ಮಹಿಳಾ ನಿರಂತರ ಉಳಿತಾಯ ಸಂಘ | ೧೦ | ೧೦ | ೬ | ೧೦,೦೦೦.೦೦ | ಇಲ್ಲ |
| ೫. | ಗೀತಾಲಕ್ಷ್ಮಿ ಮಹಿಳಾ ನಿರಂತರ ಉಳಿತಾಯ ಸಂಘ | ೧೦ | ೧೦ | ೭ | ೮,೦೦೦.೦೦ | ಇಲ್ಲ |

### ೪.೩ ಶಿಕ್ಷಣ ವ್ಯವಸ್ಥೆ

ಒಂದು ಸಮಾಜದಲ್ಲಿ ಏನಾದರೂ ಬದಲಾವಣೆಗಳು ಸಂಭವಿಸಿವೆ ಎಂದರೆ ಅದಕ್ಕೆ ಶಿಕ್ಷಣ ಸಹ ಕಾರಣವಾಗಿರುತ್ತದೆ. ಶಿಕ್ಷಣದಿಂದಾಗಿ ಆಗುವ ಪರಿವರ್ತನೆ ಬಹಳ ಪರಿಣಾಮಕಾರಿಯಾಗಿರುವಂತದ್ದು. "ಶಿಕ್ಷಣಮಟ್ಟವು ಎಲ್ಲಿ ಉತ್ತಮವಾಗಿದೆಯೋ ಅಲ್ಲಿ ಆ ಜನಾಂಗದಲ್ಲಿ ಸಮಾಜ ಎಲ್ಲ ವಿಧದಲ್ಲಿಯೂ ಮುಂಬರುವ ಅವಕಾಶವಿದೆ"[೬] ಎಂಬುದಾಗಿ ಹನೂರುರುವರು ಉಲ್ಲೇಖಿಸಿದ್ದಾರೆ. ಶಿಕ್ಷಣವು ಮಾನವನ ಜೀವನದಲ್ಲಿ ಬಹಳ ಸುಲಭವಾಗಿ ಪರಿವರ್ತನೆಯನ್ನು ತರುವ ಒಂದು ಮಾಧ್ಯಮವಾಗಿದೆ. ಈ ಹಿಂದೆ ಅನೇಕ ವಿದ್ವಾಂಸರು ಈ ಸಮುದಾಯದವರ ಸಂಶೋಧನೆ ನಡೆಸಿದ್ದಾರೆ ಅವುಗಳಲ್ಲಿ ಹೆಚ್ಚಾಗಿ ಬೇಡರಲ್ಲಿ ಶಿಕ್ಷಣ ವ್ಯವಸ್ಥೆ ಸುಧಾರಿಸಿಲ್ಲ ಎಂಬುದಾಗಿ ತಿಳಿಸಿದ್ದಾರೆ. ಅದರಂತೆ ಎಂ.ಜಿ.ಈಶ್ವರಪ್ಪರವರು ಮ್ಯಾಸಬೇಡರು ಎಂಬ ಪುಸ್ತಕದಲ್ಲಿ "ಇವರ ಜನಾಂಗದಲ್ಲಿ ವಿದ್ಯಾವಂತರು ಸಿಗುವುದು ಅಪರೂಪ"[೭] ಎಂದು ಭಾವನೆ ವ್ಯಕ್ತಪಡಿಸಿದ್ದಾರೆ. ಇದಕ್ಕೆ ವಿರುದ್ಧವಾಗಿ ಇಂದು ಇದೇ ಸಮುದಾಯದಲ್ಲಿ ಹೆಚ್ಚು ವಿದ್ಯಾವಂತರು ಸಿಗುವುದನ್ನು ಕಾಣಬಹುದಾಗಿದೆ. ಇದರಂತೆ ಕೂಡ್ಲಿಯಲ್ಲಿಯೂ ಸಹ ಈ ಹಿಂದೆ ವಿದ್ಯಾವಂತರು ಸಿಗುವುದು ಅಪರೂಪವಾಗಿತ್ತು ಎಂಬುದು

ಸತ್ಯವಾದ ಸಂಗತಿಯಾಗಿತ್ತು. ಇಂದು ಶಿಕ್ಷಣ ವ್ಯವಸ್ಥೆಯಲ್ಲಿ ಆದ ಬದಲಾವಣೆ ಬಗ್ಗೆ ಹೇಳಿದರೆ ತೀರದಷ್ಟು ಇದೆ.

**ಶಿಕ್ಷಣಕ್ಕೆ ಈ ಹಿಂದೆ ನೀಡುತ್ತಿದ್ದ ಮಹತ್ವ**

ಈ ಹಿಂದೆ ಬೇಡರು ಶಿಕ್ಷಣಕ್ಕೆ ಕಡಿಮೆ ಆದ್ಯತೆ ನೀಡಿದ್ದರು. ಇದಕ್ಕೆ ಪೂರಕವಾಗಿ ಈ ಊರಿನಲ್ಲಿ ಈಗ್ಗೆ ೨೦ - ೨೫ ವರ್ಷಗಳ ಹಿಂದೆ ಕೇವಲ ೨ - ೩ ಶಾಲೆಗಳು ಮಾತ್ರ ಇದ್ದವು. ಇನ್ನು ಇವುಗಳನ್ನು ಬೇಡ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ ಕೇವಲ ಬೆರಳಿಣಿಕೆಯಷ್ಟು ಮಾತ್ರ. ಅಂದು ಶಿಕ್ಷಣ ಪಡೆದ ವ್ಯಕ್ತಿಗಳು ಸಿಗುವುದೇ ಅಪರೂಪವಾಗಿತ್ತು. ಅಂದು ಕೇವಲ ೭ನೇ ತರಗತಿ ಓದಿದ್ದಾರೆ ಎಂದರೆ ಅವರಿಗೆ ಎಲ್ಲಿಲ್ಲದ ಗೌರವ. ೧೯೭೨ - ೭೩ರಲ್ಲಿ ಕೂಡ್ಲಿಗಿ ತಾಲೂಕಿನಲ್ಲೇ ಎಂ.ಎ.ಪದವಿಯನ್ನು ಮೊಟ್ಟಮೊದಲಿಗೆ ಪಡೆದ ವ್ಯಕ್ತಿ ಕೆ.ಮಲ್ಲಣ್ಣ ಎಂಬುವವರಾಗಿದ್ದರು. ಸಂದರ್ಶನ ಸಮಯದಲ್ಲಿ ಅವರು "ನಾನು ಇಂಗ್ಲಿಶ್ ಎಂ.ಎ.ಪದವಿ ಮುಗಿಸಿದಾಗ ಊರಿನಲ್ಲಿ ಎಲ್ಲರೂ ನನ್ನನ್ನು ಮನೆಯ ಬಾಗಿಲ ಮರೆಯಲ್ಲಿ ನಿಂತು ನೋಡುತ್ತಿದ್ದರು" ಎಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಈ ಊರಿನಲ್ಲಿನ ಬೇಡ ಸಮುದಾಯದವರಲ್ಲಿ ಶಿಕ್ಷಣದ ಬಗ್ಗೆ ಇದ್ದ ಅರಿವು ನಮಗೆ ವೇದ್ಯವಾಗುತ್ತದೆ. ಇನ್ನು ಸ್ತ್ರೀಯರ ವಿಷಯಕ್ಕೆ ಬಂದಾಗ ಹೆಣ್ಣುಮಕ್ಕಳು ಶಾಲೆಗಳಿಗೇ ಹೋಗಬಾರದೆಂಬ ನಂಬಿಕೆ ಇವರಲ್ಲಿತ್ತು. ಅಂತಹ ಕಷ್ಟ ಪರಿಸ್ಥಿತಿಗಳಲ್ಲೇ ೫ ರಿಂದ ೭ನೇ ತರಗತಿ ಓದಿದ ಮಹಿಳೆಯರು ಇಂದು ಶಿಕ್ಷಕರಾಗಿರುವುದನ್ನು ಕಾಣಬಹುದು. ಅವರನ್ನು ನೋಡಿ ಇಂದು ಕೆಲವು ಅವರ ವಯಸ್ಸಿನ ಸ್ತ್ರೀಯರು ನಾವು ಓದಿದ್ದರೆ ಅವರ ಹಾಗೆ ಇರುತ್ತಿದ್ದೆವೇನೋ ಎಂದು ನೊಂದುಕೊಳ್ಳುತ್ತಾರೆ. ಅಂದು ಇದ್ದ ಆರ್ಥಿಕ ಪರಿಸ್ಥಿತಿ, ಜೀವನ ಪದ್ಧತಿಗಳಿಂದಾಗಿ ತಂದೆ - ತಾಯಿಗಳು ಮಕ್ಕಳನ್ನು ಓದಲು ಶಾಲೆಗೆ ಕಳಿಸುವ ಸಾಹಸ ಮಾಡುತ್ತಿರಲಿಲ್ಲ. ನಮಗೇಕೆ ಓದು ಎಂದು ಎಣಿಸುತ್ತಿದ್ದರು. ಮಕ್ಕಳನ್ನು ಕೂಲಿ ಕೆಲಸಕ್ಕೆ ಕಳಿಸಿ ಅವರೂ ಕೂಡ ಕೂಲಿ ಮಾಡಲು ಹೋಗಿ ಬದುಕುವ ಕಾಲ ಅದಾಗಿತ್ತು.

**ಪ್ರಸ್ತುತ ದಿನಗಳಲ್ಲಿ ಶಿಕ್ಷಣಕ್ಕೆ ನೀಡಿರುವ ಮಹತ್ವ**

ಬದಲಾವಣೆ ಎಂಬುದು ಶಿಕ್ಷಣದಲ್ಲಿ ಪ್ರವೇಶಮಾಡಿ ಇಂದು ಈ ಸಮುದಾಯದ ಜನರಲ್ಲಿ ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡುವಂತೆ ಮಾಡಿದೆ. ನಂತರದ ದಿನಗಳಲ್ಲಿ ಶಿಕ್ಷಣದ ಮಹತ್ವ ತಿಳಿದು ಹೆಚ್ಚು ಹೆಚ್ಚು ವಿದ್ಯಾವಂತರಾಗಲು ಮುಂದಾದರು ಇದಕ್ಕೆ ತಕ್ಕಂತೆ ಊರು ಬೆಳೆಯತೊಡಗಿತು. ಕೇವಲ ೩ ಶಾಲೆಗಳಿದ್ದ ಈ ಊರಿನಲ್ಲಿ ಇಂದು ಸರ್ಕಾರಿ ಹಾಗೂ ಸರ್ಕಾರೇತರ ಸಂಸ್ಥೆಗಳು ಸೇರಿದಂತೆ ೨೦ ಪ್ರಾಥಮಿಕ ಶಾಲೆಗಳಿವೆ. ೪ ಪ್ರೌಢಶಾಲೆ ಹಾಗೂ ೩ ಪದವಿಪೂರ್ವ ಹಾಗೂ ೧ ಸರ್ಕಾರಿ ಪದವಿ ಕಾಲೇಜು ಇದೆ. ಇದರಿಂದಲೇ ನಮಗೆ ತಿಳಿಯುತ್ತದೆ ಇಂದಿನ ದಿನಗಳಲ್ಲಿ ಶಿಕ್ಷಣಕ್ಕಿರುವ ಮಹತ್ವ ಇಂದು ಪ್ರತಿಯೊಂದು ಬೇಡ ಸಮುದಾಯದ ಮನೆಗಳಲ್ಲಿ ಒಬ್ಬರಿಂದ ಇಬ್ಬರು ಸದಸ್ಯರು ವಿದ್ಯಾವಂತರಾಗಿರುವುದನ್ನು ಕಾಣುತ್ತೇವೆ. ೧೯೭೦ - ೭೨ನೇ ಇಸ್ವಿಯಲ್ಲಿ ಎಂ..ಎ.ಪದವಿಯನ್ನು ಇಡೀ ಊರಿಗೆ ಒಬ್ಬರೇ ಪಡೆದ ಕಾಲ ಅದಾಗಿದ್ದರೆ ಇಂದು ಇಂತಹ ಪದವಿ ಪಡೆದ ಹಲವು ವ್ಯಕ್ತಿಗಳು ಈ ಊರಿನಲ್ಲಿದ್ದಾರೆ. ಪ್ರತಿಯೊಬ್ಬ ತಂದೆ - ತಾಯಿ ಸಹ ಇಂದು ನಮ್ಮ ಮಗು ಚೆನ್ನಾಗಿ ಓದಬೇಕು ಎಂಬ ಭಾವನೆ ತಳೆದಿದ್ದಾರೆ. ಇದು ಒಂದು ರೀತಿಯ ಬೆಳವಣಿಗೆಯೇ ಸರಿ.

ಇನ್ನೂ ಕೆಲವು ಕುಟುಂಬಗಳು ಶಾಲೆಗಳಲ್ಲಿ ತಮ್ಮ ಮಕ್ಕಳಿಗೆ ನೀಡಿರುವ ಸೌಕರ್ಯಗಳನ್ನು ನೋಡಿಯೇ ಶಾಲೆಗೆ ಕಳಿಸಿರುವ ಪ್ರಸಂಗಗಳು ಸಹ ಇಲ್ಲದಿಲ್ಲ. ಒಟ್ಟಾರೆ ಯಾವುದೇ ಒಂದು ಕಾರಣದಿಂದಾಗಿ ಅವರು ಶಿಕ್ಷಣವನ್ನು ಪಡೆಯುವಂತಾಗಿದ್ದಾರೆ.

ಒಟ್ಟಾರೆ ಹೇಳಬೇಕೆಂದರೆ ಕೂಡ್ಲಿಗಿಯಲ್ಲಿ ವಾಸಿಸುತ್ತಿರುವ ಬೇಡ ಸಮುದಾಯದ ಜನರಲ್ಲೇ ಅಧಿಕ ಪ್ರಮಾಣದ ವಿದ್ಯಾವಂತರು ಇಂದು ಕಂಡುಬರುತ್ತಾರೆ. ಹಿಂದೆ ಇದ್ದ ಶಾಲೆಗಳ ಸಂಖ್ಯೆ, ಅದರಲ್ಲಿನ ವಿದ್ಯಾರ್ಥಿಗಳ ಸಂಖ್ಯೆ (ಈ ಸಮುದಾಯಕ್ಕೆ ಸಂಬಂಧಿಸಿದಂತೆ) ಇಂದು ಗಣನೀಯವಾಗಿ ಏರಿಕೆ ಆಗಿರುವುದನ್ನು ಕಾಣುತ್ತಿದ್ದೇವೆ. ಇನ್ನೂ ಬಾಲಕಿಯರಿಗಾಗಿಯೇ ಪ್ರತ್ಯೇಕವಾದ ಶಾಲೆಗಳಲ್ಲಿ ಬೇಡ ಸಮುದಾಯದ ಹೆಣ್ಣುಮಕ್ಕಳು ವಿದ್ಯಾಭ್ಯಾಸ ಮಾಡುತ್ತಿರುವುದು ಕಂಡುಬರುತ್ತಿದೆ. ಇದಕ್ಕೆ ಸಂಬಂಧಿಸಿದಂತೆ ಒಂದು ಪಟ್ಟಿಯನ್ನು ಈ ಮುಂದೆ ತಿಳಿಸಲಾಗಿದೆ. ಇಂದು ಕೂಡ್ಲಿಗಿ ಪಟ್ಟಣದಲ್ಲಿ ಬೇಡರ ಬಗ್ಗೆ ಸಂದರ್ಶನ ನಡೆಸಿದಾಗ ಪ್ರತಿ ಮನೆಗೆ ಒಬ್ಬರಿಂದ ಇಬ್ಬರು ಸದಸ್ಯರು ಶಿಕ್ಷಣ ಪಡೆದವರಾಗಿದ್ದಾರೆ. ಸುಮಾರು ೧೫ ರಿಂದ ೨೦ ಮಂದಿ ಸ್ನಾತಕೋತ್ತರ ಪದವಿ ಮುಗಿಸಿದವರಾಗಿದ್ದಾರೆ. ಹಾಗೂ ೫ - ೬ ಜನ ಎಂ.ಫಿಲ್ ಹಾಗೂ ಪಿಎಚ್.ಡಿ. ಮಾಡುತ್ತಿರುವ ವಿದ್ಯಾರ್ಥಿಗಳಿದ್ದಾರೆ.

## ಕೂಡ್ಲಿಗಿ ಪಟ್ಟಣದ ವ್ಯಾಪ್ತಿಯಲ್ಲಿನ ಪ್ರಾಥಮಿಕ ಶಾಲೆಗಳ ಒಟ್ಟು ವಿವರ

## ಹಾಗೂ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ದಾಖಲಾತಿ ವಿವರ

| ಶಾಲೆ ಹೆಸರು | ಸ್ಥಾಪಿತ ವರ್ಷ | ಮಾಧ್ಯಮ | ವಾರ್ಡ್ ಸಂಖ್ಯೆ | ತರಗತಿ | ವಿದ್ಯಾರ್ಥಿಗಳ ಒಟ್ಟು ಸಂಖ್ಯೆ | | | ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ | | |
|---|---|---|---|---|---|---|---|---|---|---|
| | | | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಶ್ರೀಮತಿ ಉಜ್ಜಿನಿ ಗೌರಮ್ಮ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಬಾಲಕಿಯರ ಶಾಲೆ | ೧೯೦೯ | ಕನ್ನಡ | ೩ | ೧-೭ | ೧೩೪ | ೧೨೬ | ೨೬೦ | ೬೯ | ೭೬ | ೧೪೫ |
| ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಸೊಲ್ಲಮ್ಮ ಮಂದಿರ | ೧೯೭೩ | ಕನ್ನಡ | ೨ | ೧-೭ | ೧೧೮ | ೧೧೪ | ೨೩೨ | ೫೬ | ೪೮ | ೧೦೪ |
| ಶ್ರೀಮತಿ ಬಂಡ್ರಿ ಲಕ್ಷ್ಮೀದೇವಿ ಚನ್ನಪ್ಪಶೆಟ್ಟಿ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ | ೧೯೫೩ | ಕನ್ನಡ | ೭ | ೧-೭ | ೨೦೯ | ೧೬೯ | ೩೭೮ | ೯೮ | ೮೮ | ೧೮೬ |
| ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ೪ನೇ ವಾರ್ಡ್ | ೧೯೪೩ | ಕನ್ನಡ | ೪ | ೧-೭ | ೬೪ | ೬೩ | ೧೨೭ | ೪೪ | ೩೦ | ೭೪ |
| ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಅಜಾದ್ ನಗರ | ೧೯೭೨ | ಕನ್ನಡ | ೧ | ೧-೫ | ೫೩ | ೫೮ | ೧೧೧ | ೧೬ | ೧೬ | ೩೨ |
| ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಹರಿಜನಕೇರಿ | ೧೯೫೮ | ಕನ್ನಡ | ೬ | ೧-೬ | ೧೩೮ | ೧೨೨ | ೨೬೦ | ೩೯ | ೪೯ | ೮೮ |
| ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೋರಖಣ | ೧೯೭೨ | ಕನ್ನಡ | ೧ | ೧-೫ | ೯೨ | ೧೧೮ | ೨೧೦ | ೩೧ | ೪೯ | ೮೦ |
| ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೆ.ಇ.ಬಿ.ಕಾಲೋನಿ | ೧೯೮೫ | ಕನ್ನಡ | ೬ | ೧-೭ | ೧೦ | ೧೨ | ೨೨ | ೨ | ೦೧ | ೩ |
| ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಅ.ದೇ.ಗುಡ್ಡ | ೧೯೫೨ | ಕನ್ನಡ | | ೧-೫ | ೮೦ | ೭೭ | ೧೫೭ | ೩೫ | ೫೩ | ೬೮ |
| ಸರಕಾರಿ ಕಿರಿಯ ಪ್ರಾಥಮಿಕ ಶಾಲೆ, ಗೊಲ್ಲರಹಟ್ಟಿ | ೧೯೬೦ | ಕನ್ನಡ | | ೧-೬ | ೪೪ | ೩೫ | ೭೯ | --- | --- | --- |
| ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೆ.ಕೆ.ಹಟ್ಟಿ | ೧೯೫೭ | ಕನ್ನಡ | | ೧-೭ | ೯೬ | ೯೨ | ೧೮೮ | ೮೯ | ೮೪ | ೧೭೩ |
| ಹಿ.ವಿ.ಪೀ.ಹಿರಿಯ ಪ್ರಾಥಮಿಕ ಶಾಲೆ, ಬಾಪೂಜಿನಗರ | ೧೯೮೨ | ಕನ್ನಡ | ೧ | ೧-೭ | ೩೧೦ | ೨೩೫ | ೫೪೫ | ೪೮ | ೪೮ | ೯೬ |
| ಶಾರದಾ ಹಿರಿಯ ಪ್ರಾಥಮಿಕ ಶಾಲೆ | ೧೯೯೨ | ಕನ್ನಡ | | ೧-೪ | ೩೪ | ೨೯ | ೬೩ | ೯ | ೭ | ೧೬ |
| ವಿನಾಯಕ ಕಿರಿಯ ಪ್ರಾಥಮಿಕ ಶಾಲೆ | ೧೯೯೦ | ಕನ್ನಡ | | ೧-೪ | ೧೬ | ೩೩ | ೪೯ | ೫ | ೫ | ೧೦ |
| ಜ್ಞಾನಭಾರತಿ ಹಿರಿಯ ಪ್ರಾಥಮಿಕ ಶಾಲೆ | ೧೯೯೨ | ಕನ್ನಡ ಮತ್ತು ಇಂಗ್ಲಿಶ್ | | ೧-೭ | ೨೧೦ | ೯೪ | ೨೧೦ | ೩೧ | ೨೪ | ೫೫ |
| ಸರಕಾರಿ ಕಿರಿಯ ಪ್ರಾಥಮಿಕ ಶಾಲೆ ಒಂದನೇ ವಾರ್ಡ್ | ೧೯೭೦ | ಕನ್ನಡ | ೧ | ೧-೫ | ೪೮ | ೪೧ | ೮೯ | ೧೫ | ೯ | ೨೪ |

**ಕೂಡ್ಲಿಗಿ ಪಟ್ಟಣದ ವ್ಯಾಪ್ತಿಯಲ್ಲಿನ ಪ್ರೌಢ ಹಾಗೂ ಕಾಲೇಜು ಶಿಕ್ಷಣ**

**ಹಾಗೂ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ದಾಖಲಾತಿ ವಿವರ**

| ಶಾಲೆ ಹೆಸರು | ಮಾಧ್ಯಮ | ತರಗತಿ | ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ಶ್ರೀ ರೇಣುಕ ಸಂಯುಕ್ತ ಪದವಿ ಪೂರ್ವ ಕಾಲೇಜು | ಕನ್ನಡ | ೮-೧೦<br>ಪಿ.ಯು. | ೯೧<br>೦೯ | ೭೯<br>೧೧ | ೧೭೦<br>೨೦ |
| ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜು | ಕನ್ನಡ | ೮-೧೦<br>ಪಿ.ಯು. | ೪೦<br>೧೪ | ೩೫<br>೦೭ | ೭೫<br>೨೧ |
| ಹಿರೇಮಠ ವಿದ್ಯಾಪೀಠ ಮಹಿಳಾ ಸಂಯುಕ್ತ ಪದವಿ ಪೂರ್ವ ಕಾಲೇಜು | ಕನ್ನಡ | ೮-೧೦<br>ಪಿ.ಯು. | ೦೦<br>೦೦ | ೨೦<br>೧೫ | ೨೦<br>೧೫ |
| ಶ್ರೀಮತಿ ಅಂಗಡಿ ವೀರಮ್ಮ ತಿರುಕಪ್ಪ ಸರ್ಕಾರಿ ಪ್ರಥಮ ದರ್ಜೆ ಪೂರ್ವ ಕಾಲೇಜು | ಕನ್ನಡ | ಪದವಿ | ೧೫ | ೧೦ | ೨೫ |

**೪.೪ ರಾಜಕೀಯ ಬದಲಾವಣೆಗಳು**

ಇಂದಿನ ದಿನಗಳಲ್ಲಿ ರಾಜ್ಯಾದ್ಯಂತ ಬೇಡರ ಬಗ್ಗೆ ಪರಿಶೀಲನೆ ನಡೆಸಿದರೆ ರಾಜಕೀಯವಾಗಿ ತೀವ್ರ ಬದಲಾವಣೆಗಳಾಗಿರುವುದು ಕಂಡುಬರುತ್ತದೆ. ಇದಕ್ಕೆ ಕೂಡ್ಲಿಗಿ ಪ್ರದೇಶದಲ್ಲಿನ ಬೇಡರ ಪಾಲು ಇದೆ. ಸುಮಾರು ಹತ್ತಿಪ್ಪತ್ತು ವರ್ಷಗಳ ಹಿಂದೆ ಈ ಸಮುದಾಯದವರಿಗೆ ರಾಜಕೀಯವಾದ ಅರಿವು ಇರಲಿಲ್ಲ. ನಂತರ ರಾಜಕೀಯ ಎಂಬ ಗಾಳಿ ಇಂದು ದೇಶದ ಹಳ್ಳಿ ಹಳ್ಳಿಗಳಲ್ಲಿ ನುಗ್ಗಿ ತನ್ನ ಹತೋಟಿಯನ್ನು ಸಾಧಿಸಿದೆ. ಕ್ರಮೇಣ ಇದರ ಪರಿಣಾಮವಾಗಿ ಇವರಲ್ಲಿ ತಮ್ಮ ಸಮುದಾಯದ ಬಗ್ಗೆ ಚಿಂತನೆ ಮಾಡುವ ಶಕ್ತಿ ಬಂದಿತು. ಇದರಿಂದ ಪ್ರಭಾವಿತಗೊಂಡ ಈ ಜನರು ರಾಜಕೀಯ ರಂಗಕ್ಕೆ ಪ್ರವೇಶಿಸಿದರು. ಕೂಡ್ಲಿಗಿ ತಾಲೂನಿಕನಾದ್ಯಂತ ಬೇಡ ಸಮುದಾಯವರೇ ಹೆಚ್ಚಾಗಿ ಇರುವುದರಿಂದ ಇದೇ ಸಮುದಾಯದ ವ್ಯಕ್ತಿಗಳು ಈ ಪ್ರದೇಶದಲ್ಲಿನ ರಾಜಕೀಯದಲ್ಲಿ ಉನ್ನತ ಸ್ಥಾನಮಾನಗಳನ್ನು ಪಡೆದರು. ಇದರ ಬಗ್ಗೆ ಅಂದರೆ ಅಧಿಕಾರ ಮೊದಲಾದ ಆಮಿಷಗಳಿಂದ ಈ ಜನರು ರಾಜಕೀಯಕ್ಕೆ ಹೆಚ್ಚು ಆದ್ಯತೆ ನೀಡತೊಡಗಿದರು. ಪ್ರಸ್ತುತ ದಿನಗಳಲ್ಲಿ ಕೇವಲ ಇಲ್ಲಿ ಮಾತ್ರವಲ್ಲದೆ ರಾಜ್ಯದ ವಿವಿದೆಡೆ ವಿವಿಧ ಜನರು ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಿ ಜನರು ಚುನಾವಣೆಗಳು ಹಬ್ಬದ ರೀತಿಯಲ್ಲಿ ಆಚರಿಸುವ ಕಾಲವಾಗಿದೆ. ಇದರೊಂದಿಗೆ ಜನರಲ್ಲಿ ಕುಡಿತ ಮೊದಲಾದ ದುಶ್ಚಟಗಳು ಇನ್ನು ಹೆಚ್ಚು ಆಗುತ್ತಿವೆ. ಇದರಿಂದ ಎಷ್ಟೋ ಕುಟುಂಬಗಳು ವಿರಸದಿಂದ ಪರಸ್ಪರ ದ್ವೇಷದಿಂದ ಹಲ್ಲು ಮಸೆಯುವ ಪ್ರಸಂಗಗಳು ಇಲ್ಲದಿಲ್ಲ. ಇದಿಷ್ಟೇ ಅಲ್ಲದೆ ಈ ಊರಿನ ಅನೇಕ ಜನ ಬೇಡರ ಸ್ತ್ರೀಯರು ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದಾರೆ.

ಈ ಹಿಂದೆ ಕೂಡ್ಲಿಗಿ ಗ್ರಾಮೀಣ ಪ್ರದೇಶವಾಗಿದ್ದರಿಂದ ಇದರಲ್ಲಿ ಗ್ರಾಮಪಂಚಾಯ್ತಿ ವ್ಯವಸ್ಥೆ ಇತ್ತು. ಅಂದು ಗ್ರಾಮಪಂಚಾಯಿತಿಗೆ ಸಂಬಂಧಿಸಿದ ಚುನಾವಣೆಗಳು ನಡೆಯುತ್ತಿದ್ದವು. ಅಂದು ಹೆಚ್ಚೆಂದರೆ ಅಲ್ಲೊಬ್ಬ ಇಲ್ಲೊಬ್ಬ ವ್ಯಕ್ತಿಗಳು ಇದರಲ್ಲಿ ಅಂದರೆ ರಾಜಕೀಯದಲ್ಲಿ ಭಾಗವಹಿಸುವ ಪರಿಸ್ಥಿತಿ ಇತ್ತು. ಆದರೆ ಇಂದು ಹೆಚ್ಚಿನ ಸಂಖ್ಯೆಯಲ್ಲಿ ಬೇಡರೇ ಭಾಗವಹಿಸುತ್ತಿದ್ದಾರೆ. ಭಾಗವಹಿಸುವುದರ ಜೊತೆಗೆ ಸ್ಪರ್ಧಿಸುವ

ಮನೋಧರ್ಮ ಹೊಂದಿದ್ದಾರೆ. ಈಗ ಕೂಡ್ಲಿಗಿ ಪಟ್ಟಣಪಂಚಾಯಿತಿ ವ್ಯಾಪ್ತಿಗೆ ಬರುವ ಅನುದಾನ ಸೌಕರ್ಯಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳುವುದರಲ್ಲಿ ಯಶಸ್ವಿಯಾಗಿದ್ದಾರೆ. ಸದ್ಯ ಪಟ್ಟಣಪಂಚಾಯ್ತಿ ಅಧ್ಯಕ್ಷರು ಸಹ ಈ ಸಮುದಾಯದವರೇ ಆಗಿದ್ದಾರೆ. ಇದಕ್ಕೂ ಮುಂದೆ ಹಲವು ಜನ ಸ್ತ್ರೀಯರು ಸ್ಪರ್ಧಿಸಿ ಜಯಸಾಧಿಸಿ ಆಡಳಿತ ನಡೆಸಿರುವ ಉದಾಹರಣೆಗಳಿವೆ. ಪಟ್ಟಣ ಪಂಚಾಯ್ತಿ ಚುನಾವಣೆಯಲ್ಲಿ ಒಟ್ಟು ೧೮ ಜನರಿದ್ದು, ಇದರಲ್ಲಿ ಎಂಟು ಜನ ಬೇಡ ಸಮುದಾಯದವರೆ ಸದಸ್ಯರಿದ್ದಾರೆ. ಇಂತಹ ಪರಿಸ್ಥಿತಿಗಳಲ್ಲೂ ಕೂಡ್ಲಿಗಿ ಪಟ್ಟಣ ವ್ಯಾಪ್ತಿಯಲ್ಲಿನ ಹಲವು ಬೇಡ ಜನರು ಮುಗ್ಧರಾಗಿರುವುದನ್ನು ತೀರಾ ಹಿಂದುಳಿದ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ. ರಾಜಕೀಯದಲ್ಲಿ ಈ ಜನರು ಎಷ್ಟು ಬೆಳವಣಿಗೆ ಸಾಧಿಸಿದ್ದಾರೆಯೋ ಅಷ್ಟೇ ಪ್ರಮಾಣದ ದುಷ್ಪರಿಣಾಮಗಳನ್ನು ಎದುರಿಸುತ್ತಿರುವುದು ಗಮನಿಸಬೇಕಾದ ಅಂಶವಾಗಿದೆ. ರಾಜಕೀಯ ಗಾಳಿ ಪ್ರತಿ ಮನೆ ಮನೆಗೂ ಬೀಸಿ ಅದು ತನ್ನೊಂದಿಗೆ ಅನೇಕ ಪರಿಣಾಮಗಳನ್ನುಂಟುಮಾಡಿದೆ. ಇದರಿಂದಾಗಿ ಒಂದು ಮನೆಯಲ್ಲಿನ ಸದಸ್ಯರ ನಡುವೆ ವಿರಸ ಅವರಲ್ಲಿಯೇ ವೈಮನಸ್ಸು ಒಂದೇ ಮನೆಯಲ್ಲಿ ವಿವಿಧ ರಾಜಕೀಯ ಪಕ್ಷಗಳ ಪ್ರವೇಶದಿಂದಾಗಿ ಪರಸ್ಪರ ದ್ವೇಷಿಗಳಾಗಿದ್ದಾರೆ. ಇಂತಹ ಆಧುನಿಕ ರೀತಿಯ ಚುನಾವಣೆಗಳಿಂದಾಗಿ ಚಿಕ್ಕವಯಸ್ಸಿನ ಮಕ್ಕಳು, ಯುವಕರ, ವೃದ್ಧರು ಕುಡಿತಕ್ಕೆ ದಾಸರಾಗಿರುವ ಉದಾಹರಣೆಗಳು ಇವೆ. ಇದು ಒಂದು ರೀತಿಯ ವಿಷಾದದ ಸಂಗತಿ. ಕೆಲವು ಸಾರಿ ಈ ಚುನಾವಣೆಗಳಿಗಾಗಿ ಈ ಸಮುದಾಯದವರು ಇತರೆ ಸಮುದಾಯದವರೊಂದಿಗೆ ಕಲಹ ಮಾಡಿದ ಘಟನೆಗಳೂ ಇಲ್ಲದಿಲ್ಲ. ಈ ಸಮಸ್ಯೆ ದೇಶದ ವಿವಿದೆಡೆಗಳಲ್ಲಿ ಇರುವಂತದ್ದಾಗಿದೆ. ಇವೆಲ್ಲ ಅಂಶಗಳನ್ನು ಗಮನಿಸಿದಾಗ ಒಂದು ಕಾಲದಲ್ಲಿ ರಾಜಕೀಯದ ಗೋಜಿಗೆ ಹೋಗದಿರುವವರು ಇಂದು ಇದರಲ್ಲಿ ಎಂತಹ ಬೆಳವಣಿಗೆ ಹೊಂದಿದ್ದಾರೆ ಎಂಬ ಸತ್ಯ ತಿಳಿಯುತ್ತದೆ. ಕೂಡ್ಲಿಗಿ ಪಟ್ಟಣ ಪಂಚಾಯ್ತಿಯಲ್ಲಿ ಸ್ಪರ್ಧಿಸಿ ಸದಸ್ಯರಾಗಿರುವ ಸದಸ್ಯರ ವಿವರ ಈ ಮುಂದಿನಂತಿದೆ.

## ಕೂಡ್ಲಿಗಿ ಪಟ್ಟಣ ಪಂಚಾಯ್ತಿ ಚುನಾವಣೆಗಳಲ್ಲಿ ಸ್ಪರ್ಧಿಸಿ ಆಯ್ಕೆಯಾಗಿರುವ ಸದಸ್ಯರ ವಿವರ

(೨೦೦೦ - ೨೦೦೧)

| ಕ್ರ.ಸಂ. | ಸದಸ್ಯರ ಹೆಸರು | ಲಿಂಗ | ಮೀಸಲಾತಿ/ಜಾತಿ |
|---|---|---|---|
| ೧. | ಶ್ರೀಮತಿ ಬಿ.ಕೆ.ಜಯಮ್ಮ, ಅಧ್ಯಕ್ಷರು | ಹೆಣ್ಣು | ಪರಿಶಿಷ್ಟ ಪಂಗಡ |
| ೨. | ಶ್ರೀ ಇಸ್ಮಾಯಿಲ್ | ಗಂಡು | ಇತರೆ |
| ೩. | ಶ್ರೀ ವಿ.ವೆಂಕಟೇಶ | ಗಂಡು | ಪರಿಶಿಷ್ಟ ಪಂಗಡ |
| ೪. | ಶ್ರೀ ಬಿ.ಬಾನಪ್ಪ | ಗಂಡು | ಪರಿಶಿಷ್ಟ ಪಂಗಡ |
| ೫. | ಶ್ರೀ ಇಲಿಯಾಸ್ | ಗಂಡು | ಇತರೆ |
| ೬. | ಶ್ರೀಮತಿ ಲಕ್ಷ್ಮಿದೇವಿ | ಹೆಣ್ಣು | ಪರಿಶಿಷ್ಟ ಪಂಗಡ |
| ೭. | ಶ್ರೀಮತಿ ಯಶೋದಮ್ಮ | ಹೆಣ್ಣು | ಪರಿಶಿಷ್ಟ ಪಂಗಡ |
| ೮. | ಶ್ರೀಮತಿ ಮಂಜುಳ | ಹೆಣ್ಣು | ಇತರೆ |
| ೯. | ಶ್ರೀ ಉದಯ ಜನ್ನು | ಗಂಡು | ಇತರೆ |
| ೧೦. | ಶ್ರೀ ವೇಣುಗೋಪಾಲ | ಗಂಡು | ಪರಿಶಿಷ್ಟ ಪಂಗಡ |
| ೧೧. | ಶ್ರೀ ಟಿ.ವೆಂಕಟೇಶ | ಗಂಡು | ಪರಿಶಿಷ್ಟ ಪಂಗಡ |
| ೧೨. | ಶ್ರೀ ಡಿ.ಅಜ್ಜಯ್ಯ | ಗಂಡು | ಪರಿಶಿಷ್ಟ ಜಾತಿ |
| ೧೩. | ಶ್ರೀ ವೀರಣ್ಣ | ಗಂಡು | ಪರಿಶಿಷ್ಟ ಪಂಗಡ |
| ೧೪. | ದಾಸ್ಯಾನಾಯ್ಕ | ಗಂಡು | ಪರಿಶಿಷ್ಟ ಜಾತಿ |
| ೧೫. | ಗೀತಾ ಮಂಜುನಾಥ | ಗಂಡು | ಇತರೆ |
| ೧೬. | ರೇಣುಕ ಮಲ್ಲಿಕಾಜುನ | ಹೆಣ್ಣು | ಇತರೆ |
| ೧೭. | ಜಾಫರ್ | ಗಂಡು | ಇತರೆ |
| ೧೮. | ಆಶಾಬಿ | ಹೆಣ್ಣು | ಇತರೆ |

**ಅಡಿಟಿಪ್ಪಣಿಗಳು**

೧. ಎಂ.ಪಿ.ವೀಣಾ, ಮನೆ, ಸಮಾಜ ಮತ್ತು ಸಂಸ್ಕೃತಿ, ಪು. ೪೪

೨. ಡಾ.ಕೆ.ಎಂ.ಮೈತ್ರಿ, ಬುಡಕಟ್ಟು ಕುಲಕಸುಬುಗಳು, ಪು. ೧೯೨

೩. ಮೀರಸಾಬಿಹಳ್ಳಿ ಶಿವಣ್ಣ (ಲೇ), ಪ್ರಜಾವಾಣಿ ದೀಪಾವಳಿ ವಿಶೇಷಾಂಕ, ೨೦೦೨, ಪು. ೧೯೮

೪. ಎಂ.ಜಿ.ಈಶ್ವರಪ್ಪ, ಮ್ಯಾಸಬೇಡರು, ಪು. ೪೮

೫. ಪದ್ಮಾವಿಠಲ (ಲೇ), ಸಂಯುಕ್ತ ಕರ್ನಾಟಕ ದಿನಪತ್ರಿಕೆ (ಸಾಪ್ತಾಹಿಕ ಸೌರಭ), ಪು. ೮

೬. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಪು. ೨೦೦

೭. ಎಂ.ಜಿ.ಈಶ್ವರಪ್ಪ, ಮ್ಯಾಸಬೇಡರು, ಪು. ೪೮

# ೫

# ಬೇಡರ ಸಾಂಸ್ಕೃತಿಕ ಬದುಕಿನ ಬದಲಾವಣೆಗಳು

ಪರಿವರ್ತನೆ ಅಥವಾ ಬದಲಾವಣೆ ಸರ್ವವ್ಯಾಪಕವಾದ ಒಂದು ಪ್ರಕ್ರಿಯೆಯಾಗಿದೆ. ಇದರ ಪ್ರಭಾವ ಸಮಾಜದ ಎಲ್ಲಾ ಸಮುದಾಯಗಳ ಮೇಲೆ ಪರಿಣಾಮ ಬೀರಿದೆ. ಇದು ತನ್ನ ಹಸ್ತವನ್ನು ಎಲ್ಲೆಂದರಲ್ಲಿ ಚಾಚಿ ಹಲವಾರು ಅಂಶಗಳನ್ನು ಆವರಿಸಿಕೊಂಡಿದೆ. ಇದರಲ್ಲಿ ಸಂಸ್ಕೃತಿಯೂ ಸಹ ಸೇರಿಕೊಂಡಿದೆ. ಹೀಗೆ ಬೇಡರ ಸಾಂಸ್ಕೃತಿಕ ಬದುಕಿನಲ್ಲಿ ಕೊಂಚ ಬದಲಾವಣೆಯಾಗಿ ಅವುಗಳಿಗೆ ಪರ್ಯಾಯವಾಗಿ ಇತರೆ ಅಂಶಗಳನ್ನು ಅನುಸರಿಸುವುದು ಕಂಡುಬರುತ್ತದೆ. ಇದಕ್ಕೆ ಮೂಲ ಕಾರಣವೆಂದರೆ ನಗರೀಕರಣ. ಬೇಡರ ವಾರ್ಷಿಕ ಹಾಗೂ ಜೀವನಾವರ್ತಕ ಆಚರಣೆಗಳಲ್ಲಿ ಈ ಹಿಂದೆ ಇದ್ದ ಕಟ್ಟುನಿಟ್ಟಿನ ಪದ್ಧತಿ, ಸಂಪ್ರದಾಯ, ಆಚರಣೆ, ಆಚಾರ - ವಿಚಾರಗಳಲ್ಲಿ ಪರಿವರ್ತನೆಯ ಅಂಶಗಳನ್ನು ವಿಶೇಷವಾಗಿ ಗುರುತಿಸಬಹುದಾಗಿದೆ.

## ೫.೧ ಉಡುಗೆ ತೊಡುಗೆಗಳು

ಬೇಡರು ತಮ್ಮದೇ ಆದ ರೀತಿಯಲ್ಲಿ ವಿಶಿಷ್ಟ ರೀತಿಯ ಉಡುಗೆಗಳನ್ನು ಧರಿಸುತ್ತಿದ್ದರು. ಗಂಡಸರು ಒಂದು ಚಡ್ಡಿ ಅಥವ ಚಲ್ಲಣ ಹೆಗಲಮೇಲೆ ಕರಿಯ ಕಂಬಳಿ ಹಾಕಿಕೊಂಡು ಈ ವ್ಯವಸ್ಥೆ ತೀರಾ ಸರಳವಾಗಿತ್ತು. ಸ್ವಲ್ಪ ವಯಸ್ಸಾದ ವ್ಯಕ್ತಿಗಳು ತಲೆಗೆ ರುಮಾಲು ಸುತ್ತುವ ಪದ್ಧತಿ ಇತ್ತು. ಹಿಂದೆ ಕೇವಲ ಇವರ ಉಡುಗೆ ತೊಡುಗೆಗಳನ್ನು ನೋಡಿದ ಮಾತ್ರಕ್ಕೆ ಇವರು ಬೇಡರು ಎಂದು ಗುರುತಿಸುವ ಕಾಲ ಅದಾಗಿತ್ತು. ಅದೇ ರೀತಿ ಕೂಡ್ಲಿಯಲ್ಲಿಯೂ ಸಹ ಈ ಹಿಂದೆ ಬೇಡರು ಚಲ್ಲಣಗಳನ್ನು ಧರಿಸುವ ಪದ್ಧತಿ ಇತ್ತು. ಇದಕ್ಕೆ ಆಧಾರವಾಗಿ ''ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನಲ್ಲಿ ಚಲ್ಲಣಗಳಿಗೆ ಲಾಡಿ ಹಾಕುವುದಿಲ್ಲ''[೧] ಎಂಬುವ ಎಂ.ಜಿ.ಈಶ್ವರಪ್ಪ

ಅವರ ಅಭಿಪ್ರಾಯವಾಗಿದೆ. ಆದರೆ ಆಧುನೀಕರಣಕ್ಕೆ ಒಳಪಟ್ಟ ಇಂದಿನ ದಿನಗಳಲ್ಲಿ ಕೂಡ್ಲಿಗಿ ತಾಲೂಕಿನಲ್ಲಿ ನಂಬಲಾರದಷ್ಟು ಬದಲಾವಣೆ ಆಗಿದೆ. ಅದೇ ರೀತಿ ಹೆಂಗಸರಿಗೆ ಸಂಬಂಧಿಸಿದಂತೆ "ಹೆಂಗಸರು ಬಿಳಿಯ ದಟ್ಟಿ ಸೀರೆ ಉಡುತ್ತಾರೆ. ರವಿಕೆ ಅಥವಾ ಕುಪ್ಪಸ ತೊಡುಗುವುದಿಲ್ಲ"[3] ಎನ್ನುವ ಅಭಿಪ್ರಾಯವೂ ಸಹ ಇಂದು ಇವರಿಗೆ ಅನ್ವಯಿಸುವುದಿಲ್ಲ. ನಗರೀಕರಣದ ಗಾಳಿಯಿಂದಾಗಿ ಆಗಿದ್ದ ಚಡ್ಡಿ, ಚಲ್ಲಣಗಳು ಹಾರಿಹೋಗಿ ಅದರೊಂದಿಗೆ ಅಂಗಿ, ವಿವಿಧ ರೀತಿಯ ಪ್ಯಾಂಟು, ಸೀರೆ, ರವಿಕೆಗಳು ಬಂದಿವೆ. ಪ್ರಸ್ತುತ ದಿನಗಳಲ್ಲಿ ಇವರ ಉಡುಗೆ ತೊಡುಗೆಗಳನ್ನು ನೋಡಿದ ಮಾತ್ರಕ್ಕೆ ಇವರು ಬೇಡರು ಎಂದು ಹೇಳುವುದು ಅಸಾಧ್ಯದ ಮಾತಾಗಿದೆ. ಹೆಂಗಸರು ಹಾಗೂ ಗಂಡಸರಲ್ಲಿ ಒಂದು ರೀತಿಯ ಬದಲಾವಣೆ ಕಂಡರೆ ಇನ್ನು ಯುವಕ, ಯುವತಿಯರಲ್ಲಿ ಆದ ಬದಲಾವಣೆಗಳು ತುಂಬಾ ಆಧುನಿಕ ರೀತಿಯಲ್ಲಿವೆ. ಹುಡುಗರು ವಿವಿಧ ವಿನ್ಯಾಸದ ಪ್ಯಾಂಟು, ಶರ್ಟ್, ಜೀನ್ಸ್ ಇತ್ಯಾದಿ ಧರಿಸಿದರೆ, ಹುಡುಗಿಯರು ಚೂಡಿ, ಮಿಡಿ, ನೈಟಿಗಳನ್ನು ಧರಿಸುತ್ತಾರೆ. ಇಂತಹ ಪರಿಸ್ಥಿತಿಗಳಲ್ಲಿ ಈ ಊರಲ್ಲಿ ಮ್ಯಾಸಬೇಡರು ಹಾಗೂ ಊರುಬೇಡರು ಎಂದು ವ್ಯತ್ಯಾಸ ಮಾಡಿ ಹೇಳುವದು ತೀರ ಕಷ್ಟದ ಕೆಲಸ. ಇನ್ನು ಇಂತಹ ಉಡುಪುಗಳಲ್ಲಿಯೇ ಇಂದು ವಿವಿಧ ರೀತಿಯ ವಿನ್ಯಾಸಗಳನ್ನು ಕಾಣುತ್ತೇವೆ. 'ಒಂದು ಹೊತ್ತು ಊಟ ಮಾಡದಿದ್ದರೂ ಯಾರು ನೋಡುವುದಿಲ್ಲ ಆದರೆ ಬಟ್ಟೆ ಇರದಿದ್ದರೆ ಕಷ್ಟ' ಎಂಬ ಮನೋಧರ್ಮ ಹೊಂದಿದವರಾಗಿದ್ದಾರೆ.

### ತೊಡುಗೆಗಳು

ಹೆಂಗಸರು ಹಿಂದೆ ಈಗಿನಂತೆ ಬಂಗಾರವನ್ನು ಬಳಸುತ್ತಿರಲಿಲ್ಲ. ಅಂದು ಕೇವಲ ಸಾಧಾರಣ ರೀತಿಯ ಉಡುಪು ಧರಿಸುತ್ತಿದ್ದರು. "ಕಿವಿಗಳಿಗೆ ಹಿತ್ತಾಳೆ ಓಲೆಗಳನ್ನು ಧರಿಸುತ್ತಾರೆ, ಕೈಗೆ ಗಾಜಿನ ಬಳೆಗಳನ್ನು" ಎಂಬುದಾಗಿ ಎಂ.ಜಿ.ಈಶ್ವರಪ್ಪನವರು ಉಲ್ಲೇಖಿಸಿದ್ದಾರೆ. ಈ ಮಾತು ಇಂದು ಅರ್ಧ ಸತ್ಯವೆನಿಸಿದೆ. ಏಕೆಂದರೆ ಇಂದು ಯಾವೊಬ್ಬ ಸ್ತ್ರೀಯು ಸಹ ಕಿವಿಗೆ ಹಿತ್ತಾಳೆ ಓಲೆ ಧರಿಸುವುದಿಲ್ಲ. ಆದರೆ ಗಾಜಿನ ಬಳೆ ಧರಿಸುವುದು ರೂಢಿಯಲ್ಲಿದೆ. ಪ್ರಸ್ತುತ ದಿನಗಳಲ್ಲಿ ಸ್ತ್ರೀಯರು ಹೆಚ್ಚು ಬಂಗಾರದ ಒಡವೆಗಳ ಕಡೆ ಒಲವನ್ನು ತೋರಿದ್ದಾರೆ. ಕಿವಿಗೆ ಬಂಗಾರದ ಓಲೆ, ಬೆಂಡೋಲೆ ಧರಿಸುವುದರ ಜೊತೆಗೆ ಕೈಗೆ ಬಂಗಾರದ ಬಳೆ, ಕಾಲಿಗೆ ಗೆಜ್ಜೆ, ಕಾಲುಂಗುರು, ಕತ್ತಿಗೆ ಚಿನ್ನದ ಸರ, ಮಾಂಗಲ್ಯಸರ ಹೀಗೆ ಬೆರಳಿನ ಉಂಗುರ ಇಂತಹ ಹಲವಾರು ಆಧುನಿಕ ರೀತಿಯ ಆಭರಣ ಧರಿಸುತ್ತರೆ. ಗಂಡಸರು ಕೂಡ ಇಂದು ಕೊರಳಿಗೆ ಬಂಗಾರ ಆಧುನಿಕ ರೀತಿಯ ಆಭರಣ ಧರಿಸುತ್ತಾರೆ. ಗಂಡಸರು ಕೂಡ ಇಂದು ಕೊರಳಿಗೆ ಬಂಗಾರದ ಸರ, ಕೈಗೆ ಉಂಗುರು, ಬೆಳ್ಳಿ ಉಡುದಾರಗಳನ್ನು ಧರಿಸುವ ಪದ್ಧತಿ ಇಂದು ರೂಢಿಯಲ್ಲಿದೆ.

ಹೀಗೆ ಬೇಡರ ಉಡುಗೆ ತೊಡುಗೆಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿರುವುದನ್ನು ಗಮನಿಸಬಹುದಾಗಿದೆ.

### ೫.೨ ಊಟೋಪಚಾರಗಳು

ಆಹಾರ ಪದ್ಧತಿಗೆ ಸಂಬಂಧಪಟ್ಟಂತೆ ಮ್ಯಾಸಬೇಡ ಹಾಗೂ ಊರುಬೇಡರಲ್ಲಿ ಕೆಲವು ಸಂದರ್ಭಗಳಲ್ಲಿ ವ್ಯತ್ಯಾಸವನ್ನು ಗುರುತಿಸಬಹುದಾಗಿತ್ತು. ಆದರೆ ಇಂದು ಇವೆರಡು ಉಪಪಂಗಡಗಳಲ್ಲಿ ಅಂತಹ ವ್ಯತ್ಯಾಸಗಳೇನು

ಕಂಡುಬರುವುದಿಲ್ಲ. ಕೂಡ್ಲಿಗಿ ಪಟ್ಟಣದಲ್ಲಿನ ಮ್ಯಾಸಬೇಡರು ಇಂದು ಕೋಳಿಮಾಂಸವನ್ನು ಉಪಯೋಗಿಸುತ್ತಾರೆ. ಒಂದು ಕಾಲದಲ್ಲಿ ಇವರಲ್ಲಿ ಕೋಳಿಮಾಂಸ ತಿನ್ನುವುದು ನಿಷಿದ್ಧವಾಗಿತ್ತು. ಆದರೆ ಬದಲಾವಣೆಯಿಂದಾಗಿ ಇವರು ಇಂದು ಕೋಳಿಗಳನ್ನು ಸಾಕುವ ದೃಶ್ಯಗಳು ಕಾಣುತ್ತಿವೆ. ಸದ್ಯದ ದಿನಗಳಲ್ಲಿ ಇವರಲ್ಲಿ ಶೇಕಡ ೭೦ರಷ್ಟು ಜನರು ಕೋಳಿಮಾಂಸ ಹಾಗೂ ಕೋಳಿ ಮೊಟ್ಟೆಗಳನ್ನು ಬಳಸುತ್ತಾರೆ. ಊರನ ಬೇಡರಲ್ಲಿಯೂ ಕೂಡ ಇದೇ ವ್ಯವಸ್ಥೆ ಇದೆ. ಹಿಂದೆ ಮ್ಯಾಸಬೇಡರು ಹೆಚ್ಚಾಗಿ ಹೆಣ್ಣುದೇವತೆಗಳ ಆರಾಧಕರಾಗಿದ್ದರಿಂದ ಇವರಲ್ಲಿ ಮಾಂಸದ ಅಡುಗೆ ಸರ್ವೇಸಾಮಾನ್ಯವಾಗಿತ್ತು. ಊಟದ ವ್ಯವಸ್ಥೆಗೂ ಹಾಗೂ ಜನರು ನಡೆದುಕೊಳ್ಳುವ ದೇವರುಗಳಿಗೂ ಒಂದು ರೀತಿಯ ಸಂಬಂಧವಿದೆ. ಇಂದು ವೈಷ್ಣವ ಧರ್ಮವೂ ಮ್ಯಾಸಬೇಡರಲ್ಲಿ ಕೂಡ ಪ್ರವೇಶ ಪಡೆದು ಧರ್ಮಸ್ಥಳ ಶ್ರೀ ಮಂಜುನಾಥ ಮಂತ್ರಾಲಯ ಶ್ರೀ ರಾಘವೇಂದ್ರ, ತಿರುಪತಿ ವೆಂಕಟೇಶ್ವರ ಇತ್ಯಾದಿ ದೇವರುಗಳ ಆರಾಧಕರಾಗಿ ಇವರ ಊಟೋಪಚಾರಗಳಲ್ಲಿ ಬದಲಾವಣೆ ಕಂಡಿದೆ. ಇಂದು ಹಬ್ಬ ಹರಿದಿನಗಳಲ್ಲಿ ಈಗ ಎಲ್ಲರೂ ಹೆಚ್ಚಾಗಿ ಸಿಹಿ ಅಡುಗೆ ಮಾಡುತ್ತಿದಾರೆ. ಆದರೆ ಒಂದು ವಿಶೇಷತೆ ಎಂದರೆ ಪ್ರತಿ ಹಬ್ಬದಲ್ಲೂ ಮೊದಲು ಸಿಹಿ ಅಡುಗೆ ಮಾಡಿ ನಂತರ 'ಕರಿ' ಎಂದು ಆಚರಿಸುತ್ತಾರೆ. ಅಂದಿನ ದಿನ ಮಾತ್ರ ಇವರು ಮಾಂಸವನ್ನು ಕಡ್ಡಾಯವಾಗಿ ಮಾಡುತ್ತಾರೆ. ಮಾಂಸದ ಊಟ ಈಗ ಕೇವಲ ಕೆಲವೇ ದಿನಗಳು ಮಾತ್ರ ಅಂದರೆ ವಾರಕ್ಕೊಮ್ಮೆ ಅಥವಾ ಎರಡು ಬಾರಿ ಬಳಸುವ ರೂಡಿ ಇಲ್ಲಿದೆ. ಹಿಂದೆ ಬೇಡರು ಅರಣ್ಯದಲ್ಲಿ ದೊರೆಯುತ್ತಿದ್ದ ಹಲವು ರೀತಿ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ತಿನ್ನುತ್ತಿದ್ದರು. ಆದರೆ ಈಗ ಆ ಸಂಪ್ರದಾಯವು ಅಳಿಸಿ ಇವರು ಮಾಂಸಕ್ಕಾಗಿ ಮಾಂಸದ ಅಂಗಡಿ ಬಳಿ ಹೋಗಿ ನಿಂತು ತೂಕ ಮಾಡಿಸಿಕೊಂಡು ಬಂದು ತಿನ್ನುವ ಹಾಗೆ ಆಗಿದೆ. ಕಾಡುಗಳೇ ವಿರಳವಾಗಿರುವ ಇಂತಹ ಪ್ರದೇಶಗಳಲ್ಲಿ ಇವರಿಗೆ ಬೇಕೆನಿಸಿರುವ ಪ್ರಾಣಿ ಪಕ್ಷಿ ಎಲ್ಲಿ ದೊರೆಯಬೇಕು? ಊಟದ ಪದ್ಧತಿಗೆ ಸಂಬಂಧಿಸಿದಂತೆ ಎಂ.ಜಿ.ಈಶ್ವರಪ್ಪನವರು "ಚಳ್ಳಕೆರೆ ತಾಲೂಕಿನ ಕೆಲವು ಪ್ರದೇಶಗಳಲ್ಲಿ ಸ್ಥಿತಿವಂತರ ಮನೆಯಲ್ಲಿ ಸತ್ತ ದನಕರುಗಳನ್ನು ಮ್ಯಾಸಬೇಡರು ಹೊತ್ತುಕೊಂಡು ಹೋಗಿ ಅದರ ಮಾಂಸ ಬಳಸುವ ರೂಢಿಯಲ್ಲಿದೆ"[೬] ಎಂದಿದ್ದಾರೆ. ಆದರೆ ಕೂಡ್ಲಿಗಿ ಸುತ್ತಮುತ್ತಲಿನ ಬೇಡರಲ್ಲಿ ಈ ವ್ಯವಸ್ಥೆ ಕಂಡುಬರುವುದಿಲ್ಲ. ಇಲ್ಲಿನ ಜನರು ಕುರಿ, ಕೋಳಿ ಮೊದಲಾದ ಪ್ರಾಣಿಗಳ ಮಾಂಸ ಬಳಸುವ ಪದ್ಧತಿ ಇದೆ. ಆದರೆ ಸತ್ತ ಪ್ರಾಣಿಗಳ ಮಾಂಸ ಬಳಸುವುದಿಲ್ಲ. ಇನ್ನು ಒಂದು ವಿಶೇಷವೆಂದರೆ ಇಲ್ಲಿನ ಕೆಲವು ಕುಟುಂಬಗಳ ಮನೆಯೊಳಗೆ ಮಾಂಸವನ್ನು ಬೇಯಿಸುವುದಿಲ್ಲ ಇನ್ನು ಕೆಲವು ಜನ ಮಾಂಸವನ್ನೇ ಬಳಸುವುದಿಲ್ಲ ಇದಕ್ಕೆ ಕಾರಣ ಅವರು ಆರಾಧಿಸುವ ದೈವಗಳಾದ ಹೊನ್ನೂರಸ್ವಾಮಿ, ಅಜ್ಜಯ್ಯ, ರಾಘವೇಂದ್ರ, ಮಂಜುನಾಥಸ್ವಾಮಿ ಇತ್ಯಾದಿಗಳ ಪ್ರಭಾವ. ಹಿಂದೆ ಬೇಡರು ಕೆಲವು ವಿಶೇಷ ಸಂದರ್ಭಗಳಲ್ಲಿ ಬ್ಯಾಟಿ ಮಾಡಿ ಉಳಿದ ಸಂದರ್ಭಗಳಲ್ಲಿ ಸಿಹಿ ಮಾಡುತ್ತಿದ್ದ ವ್ಯವಸ್ಥೆ ಈಗ ಸಂಪೂರ್ಣ ಬದಲಾಗಿ ಇದಕ್ಕೆ ವ್ಯತಿರಿಕ್ತವಾದ ಪದ್ಧತಿಯನ್ನು ಸದ್ಯ ನಾವು ಕಾಣುತ್ತೇವೆ. ಇವರಲ್ಲಿ ಕೂಡ ಇಂದು ಉಪಹಾರ, ಮಧ್ಯಾಹ್ನದ ಊಟ, ರಾತ್ರಿ ಊಟ ಮಾಡುವ ಪದ್ಧತಿ ಇಂದು ಇದೆ.

ಇನ್ನು ಕೆಲವು ವಿಶೇಷ ದಿನಗಳಲ್ಲಿ ಅಂದರೆ ಜಾತ್ರೆಗಳ ಸಮಯದಲ್ಲಿ ಕೇವಲ ಮಾಂಸದ ಅಡುಗೆ ಮಾಡುವ ಕ್ರಮ ಇಲ್ಲಿದೆ. ಅವು ಸಾಮಾನ್ಯವಾಗಿ ಹೆಣ್ಣು ದೇವತೆಗಳ ಜಾತ್ರೆ ಹಾಗೂ ಉತ್ಸವಗಳಾಗಿರುತ್ತವೆ. ಅತಿ ಸೂಕ್ಷ್ಮವಾಗಿ ಗಮನಿಸಿ ನೋಡಿದಾಗ ಇಂದು ಇಲ್ಲಿನ ಹಲವು ಜನ ಬೇಡರು ಮಾಂಸದ ಊಟವನ್ನೇ

ತ್ಯಜಿಸಿ ಅವರು ಸಂಪೂರ್ಣವಾಗಿ ಸಸ್ಯಾಹಾರಿಗಳಾಗಿ ಪರಿವರ್ತನೆಗೊಂಡಿದ್ದಾರೆ. ಹೀಗೆ ಬೇಡರ ಊಟೋಪಚಾರಗಳಲ್ಲಿ ಬದಲಾವಣೆಗಳಾಗಿರುವುದನ್ನು ಕಾಣಬಹುದಾಗಿದೆ.

**೫.೩ ಆಚರಣೆಗಳು**

ಹುಟ್ಟಿನಿಂದ ಸಾವಿನವರೆಗೆ ಇರುವ ಸಂಸ್ಕಾರ ವಿಧಿಗಳು ಕೇವಲ ಬುಡಕಟ್ಟುಗಳಲ್ಲಿ ಮಾತ್ರವಲ್ಲದೆ ಜಗತ್ತಿನ ಪ್ರತಿ ಜಾತಿ, ಜನಾಂಗಗಳಲ್ಲಿ ಇರುತ್ತದೆ. ಆದರೆ ಕೆಲವು ವಿಶೇಷ ಆಚರಣೆಗಳಲ್ಲಿ ಮಾತ್ರ ನಾವು ಕೆಲವು ವ್ಯತ್ಯಾಸಗಳನ್ನು ನೋಡಬಹುದಾಗಿದೆ. ಇಂತಹ ಕೆಲವು ಆಚರಣೆಗಳಲ್ಲಿ ರಿಯಾಯಿತಿ ಆಗಿರುವುದನ್ನು ಕಾಣುತ್ತೇವೆ. ಇದು ಕೇವಲ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪ್ರದೇಶದಲ್ಲಲ್ಲದೇ ಎಲ್ಲ ಕಡೆಯೂ ಇರಬಹುದು ಎಂದು ಎನಿಸುತ್ತಿದೆ. ಬುಡುಕಟ್ಟು ಬದುಕಿನಲ್ಲಿ ಜೀವನಾವರ್ತಕ ಆಚರಣೆಗಳು ತುಂಬಾ ಕಟ್ಟುನಿಟ್ಟು. ಆದರೆ ಇವುಗಳಲ್ಲಿ ಕೆಲವು ಅಂಶಗಳು ಮಾಯವಾಗುತ್ತಿವೆ ಎಂಬುದನ್ನು ಗಮನಿಸಬಹುದಾಗಿದೆ. ಈ ಅಧ್ಯಾಯದಲ್ಲಿ ಯಾವ ಯಾವ ಅಂಶಗಳಲ್ಲಿ ಎಂತಹ ರಿಯಾಯ್ತಿ ಪಡೆದಿದ್ದಾರೆ ಎಂಬುದನ್ನು ತಿಳಿಯೋಣ.

**ಹುಟ್ಟು**

ಹೆಣ್ಣಿನ ಬದುಕು ಸಾರ್ಥಕವಾಗಬೇಕಾದರೆ ಅವಳು ತನ್ನ ಜೀವನಾವಧಿಯಲ್ಲಿ ಮಗಳು, ಹೆಂಡತಿ, ತಾಯಿ, ಅಜ್ಜಿ ಹೀಗೆ ಹಲವು ಹಂತಗಳನ್ನು ದಾಟಬೇಕಾಗಿದೆ. ಈ ಹಿಂದೆ ಇವುಗಳಲ್ಲಿ ಒಂದು ಹಂತ ತಲುಪದೇ ಇದ್ದರೂ ಅವಳನ್ನು ಸ್ವಲ್ಪ ಸಮಾಜದಲ್ಲಿ ಕೀಳರಿಮೆ ದೃಷ್ಟಿಯಿಂದ ಕಾಣುತ್ತಿದ್ದರು. ಆದರೆ ಈಗ ಕಾಲ ಬದಲಾಗಿದೆ. ಇದರಲ್ಲಿ ಕೆಲವರು ಕೆಲವು ಹಂತಗಳನ್ನು ಮುಟ್ಟದೇ ಇರುವವರು ಇದ್ದಾರೆ. ಆದರೂ ಜನರು ಈಗ ಅವರಿಗೂ ಗೌರವಸ್ಥಾನ ಕೊಡುತ್ತಿದ್ದಾರೆ. ಬೇಡರಲ್ಲಿ ಹೆಣ್ಣುಮಗಳು ಗರ್ಭಿಣಿಯಾಗಿ ಒಂಭತ್ತು ತಿಂಗಳಾದ ಮೇಲೆ ಅವಳ ಹೆರಿಗೆ ಸಮಯದಲ್ಲಿ ಮನೆಯ ಹೊರಗೆ ಇರಿಸುತ್ತಿದ್ದರು. ಈ ವ್ಯವಸ್ಥೆ ಬಹಳ ಹಿಂದಿನ ಕಾಲದ್ದಾಗಿದೆ. ಆದರೆ ಇಂದು ಈ ಪದ್ಧತಿ ಅನುಸರಿಸುವುದು ತುಂಬಾ ಕಷ್ಟ ಸಾಧ್ಯ. ಅದು ಕೂಡ್ಲಿಗಿಯಂತ ಪಟ್ಟಣಗಳಲ್ಲಿ ತೀರಾ ಅಪರೂಪ. ಏಕೆಂದರೆ ನಗರೀಕರಣದಿಂದಾಗಿ ಜನಸಂಖ್ಯೆ ಹೆಚ್ಚಾಗಿದ್ದು ಇಂತಹ ಪ್ರದೇಶಗಳಲ್ಲಿ ಜನರು ತಮ್ಮ ಮನೆಗಳನ್ನು ಒಂದರ ಪಕ್ಕದಲ್ಲಿ ಮತ್ತೊಂದರಂತೆ ಕಟ್ಟಿಕೊಂಡಿರುವಾಗ ಮನೆ ಹೊರಗೆ ಜಾಗವೇ ಇಲ್ಲ ಇಂತಹ ಪರಿಸ್ಥಿತಿಯಲ್ಲಿ ಇನ್ನು ಗರ್ಭಿಣಿ ಸ್ತ್ರೀಯನ್ನು ಮನೆಯ ಹೊರಗೆ ಇರಿಸುವುದನ್ನು ಇನ್ನೆಲ್ಲಿಂದ ಕಾಣಬೇಕು? ಈಗ ಕೂಡ್ಲಿಗಿಯಲ್ಲಿನ ಬೇಡರು ಹೆರಿಗೆಗೆ ಪ್ರತ್ಯೇಕ ವ್ಯವಸ್ಥೆ ಅಥವಾ ಪ್ರತ್ಯೇಕ ಮನೆ ಮಾಡದೇ ಮನೆಯಲ್ಲಿಯೇ ಹೆರಿಗೆ ಮಾಡಿಸುತ್ತಾರೆ. ಇನ್ನು ಮಗುಹುಟ್ಟಿದ ನಂತರ ಬರುವ ಮಾಸವನ್ನು ಕೇವಲ ಮನೆಯಲ್ಲಿ ಹೆರಿಗೆಯಾದಾಗ ಮಾತ್ರ ಅದನ್ನು ಮನೆಯ ಮುಂದೆ ಮುಚ್ಚಿಡುತ್ತಾರೆ. ಇದರಲ್ಲಿ ಊರುನಾಯಕರು ಬಾಗಿಲ ಎಡಭಾಗಕ್ಕೆ ಮ್ಯಾಸಬೇಡರು ಬಾಗಿಲ ಬಲಭಾಗಕ್ಕೆ ಗುಂಡಿ ತೋಡಿ ಮುಚ್ಚಿಡಬೇಕೆಂಬ ನಿಯಮವನ್ನು ಸಾಮಾನ್ಯವಾಗಿ ಅನುಸರಿಸುವುದನ್ನು ಕೈಬಿಟ್ಟಿದ್ದಾರೆ. ಆದರೆ ಇಂದು ಹೆಚ್ಚಾಗಿ ಆಸ್ಪತ್ರೆಗಳಲ್ಲಿ ಹೆರಿಗೆ ಆಗುತ್ತಿವೆ. ಇಂತಹ ಸಂದರ್ಭದಲ್ಲಿ ಮಾಂಸವನ್ನು ಗುಂಡಿ ತೋಡಿ ಮುಚ್ಚಿಡುವ ಪದ್ಧತಿ ಅಲ್ಲಿ ಎಲ್ಲಿ ಅನುಸರಿಸಬೇಕು ಆಗ ಈ ಪದ್ಧತಿ ಸರ್ವೇಸಾಮನ್ಯವಾಗಿ ಮಾಯವಾಗುತ್ತದೆ. ಇನ್ನೊಂದು ವಿಚಾರ ಇಲ್ಲಿ ಗಮನಿಸಬೇಕಾದುದೆಂದರೆ ಮಗು ಹುಟ್ಟಿದ ದಿನದಂದು ಮೂರು ತಿಂಗಳುಗಳ ಕಾಲ ಮಗುವನ್ನು ಮರದೊಳಗೇ

ಇಟ್ಟು ಸಾಕುವ ಪದ್ಧತಿ ಇದೆ ಎಂಬುದನ್ನು ನಾವು ಕೇವಲ ಈಗ ತೀರಾ ಹಿಂದುಳಿದ ಹಾಗೂ ನಾಗರೀಕತೆ ಅರಿವಿಲ್ಲದ ಹಳ್ಳಿಗಳಲ್ಲಿ ಮಾತ್ರ ಕಾಣಲು ಸಾಧ್ಯ. ಆದರೆ ಸ್ವಲ್ಪ ಮುಂದುವರೆದ ಪ್ರದೇಶಗಳಲ್ಲಿ ತಮ್ಮ ಆಚರಣೆಯನ್ನು ಬಿಡಲು ಇಷ್ಟಪಡದೇ ಕೇವಲ ನಾಮಮಾತ್ರಕ್ಕೆ ಅಥವಾ ಶಾಸ್ತ್ರಪೂರ್ತಿಗೆ ಮರದೊಳಗೆ ಸ್ವಲ್ಪಹೊತ್ತು ಮಲಗಿಸುತ್ತಾರೆ. ಮುಂದೆ ನಾಮಕರಣದ ಶಾಸ್ತ್ರ ಮಾಡುತ್ತಾರೆ. ಅಂದು ಬೇಡರು ಹೆಚ್ಚಾಗಿ ಬಿದಿರಿನ ತೊಟ್ಟಿಲುಗಳನ್ನು ಬಲಸುತ್ತಿದ್ದರು. ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಕೆಲವು ಮನೆಗಳಲ್ಲಿ ಈ ರೀತಿಯ ತೊಟ್ಟಿಲುಗಳು ಮೂಲೆ ಸೇರಿವೆ. ಅವುಗಳ ಬದಲಾಗಿ ಕಟ್ಟಿಗೆ, ಕಬ್ಬಿಣದ ತೊಟ್ಟಿಲುಗಳು ಹಾಗೂ ಹೊಸ ರೀತಿಯ ರೆಡಿಮೇಡ್ ತೊಟ್ಟಿಲುಗಳು ಕಾಣುತ್ತವೆ. ನಾಮಕರಣದ ಹಬ್ಬವನ್ನು ಈ ಹಿಂದೆ ಬಹಳ ಸರಳವಾಗಿ ಆಚರಿಸುತ್ತಿದ್ದರು. ಆದರೆ ಇಂದು ಅದನ್ನು ತುಂಬಾ ವೆಚ್ಚದಾಯಕವಾಗಿ ಮನೆ ತುಂಬಾ ವಿದ್ಯುತ್ ದೀಪಗಳಿಂದ ಹಾಗೂ ತೊಟ್ಟಿಲನ್ನು ಹೂವುಗಳಿಂದ ಅಲಂಕರಿಸಿ ಬಂಧು, ಬಳಗದವರೆನ್ನೆಲ್ಲ ಕರೆದು ಅವರಿಗೆ ಸಿಹಿ ಊಟ ಹಾಕಿ, ಫಲ ತಾಂಬೂಲುಗಳನ್ನು ಕೊಟ್ಟು ಕಳಿಸುತ್ತಾರೆ. ಇಂತಹ ಬದಲಾವಣೆ ಬೇಡರಲ್ಲಿ ಸರ್ವವ್ಯಾಪಿಯಾಗಿದೆ. ಇನ್ನು ಆರ್ಥಿಕವಾಗಿ ಹಿಂದುಳಿದಂತಹ ಮನೆಗಳಲ್ಲಿ ಮಕ್ಕಳಿಗಾಗಿ ವಿಶೇಷ ರೀತಿಯ ತೊಟ್ಟಿಲುಗಳನ್ನು ಕಟ್ಟಿರುತ್ತಾರೆ. ಹಗ್ಗವನ್ನು ಒಂದು ಕಂಬದಿಂದ ಮತ್ತೊಂದು ಕಂಬಕ್ಕೆ ಕಟ್ಟಿ ಅದಕ್ಕೆ ಸೀರೆ, ರಗ್ಗು ಇತರೆ ಬಟ್ಟೆಗಳಿಂದ ತೊಟ್ಟಿಲನ್ನು ಹಾಕುತ್ತಾರೆ. ಇಲ್ಲವೆ ಮನೆಯ ಛಾವಣಿಯಿಂದ ಸೀರೆಗಳನ್ನು ಇಳಿಬಿಡುವುದುರ ಮೂಲಕ ತೊಟ್ಟಿಲನ್ನು ತಯಾರಿಸುತ್ತಾರೆ. ಇದು ಒಂದು ರೀತಿಯ ಬದಲಾದ ಪರಿಸ್ಥಿತಿ.

**ಋತುಮತಿ**

ಬೇಡರಲ್ಲಿ ಹೆಣ್ಣು ಋತುಮತಿಯಾದರೆ ಅವಳ ಸೋದರಮಾವ ಬೇವಿನ ಸೊಪ್ಪಿನಿಂದ ಗುಡಿಸಲು ಹಾಕಿಕೊಡುತ್ತಾನೆ. ಐದು ದಿನಗಳ ನಂತರ ಅವಳಿಗೆ ಶಾಸ್ತ್ರ ಮಾಡಿಸಿ ಒಳಗೆ ಕರೆದುಕೊಳ್ಳುವ ಪದ್ಧತಿ ಇತ್ತು. ಈಗ ಇದರಲ್ಲಿ ಸ್ವಲ್ಪ ಬದಲಾವಣೆಗಳು ಕಂಡಿವೆ. ಅಂದು ಅವಳಿಗೆ ಆ ಬೇವಿನ ಗುಡಿಸಲಿನಲ್ಲಿ ಮಣ್ಣಿನ ಪಾತ್ರೆಯಲ್ಲಿ ಆಹಾರ ನೀಡುತ್ತಿದ್ದರು. ಆದರೆ ಇಂದು ನಾವು ಈ ಪದ್ಧತಿ ಕಾಣುವುದಿಲ್ಲ. ಕೂಡ್ಲಿಯಲ್ಲಿ ಮ್ಯಾಸಬೇಡರು ಹಾಗೂ ಊರುಬೇಡರು ಒಂದೇ ಕಡೆ ನೆಲೆಸಿರುವುದರಿಂದ ಇಂತಹ ಶಾಸ್ತ್ರಗಳಿಂದ ಕಂಡುಹಿಡಿಯುವುದು ಕಷ್ಟದ ಕೆಲಸವಾಗಿದೆ. ಈಗ ಒಂದು ಹೆಣ್ಣು ಋತುಮತಿಯಾದರೆ ಅವಳನ್ನು ಮನೆಯೊಳಗೆ ಕರೆದುಕೊಳ್ಳುತ್ತಾರೆ. ನಗರ ಪ್ರದೇಶಗಳಲ್ಲಿ ಹೆಣ್ಣು ಮಕ್ಕಳನ್ನು ಐದು ದಿನಗಳ ಕಾಲ ಮನೆಯ ಹೊರಗೆ ಒಂಟಿಯಾಗಿ ಬಿಟ್ಟಿರುವ ಕಾಲ ಇದಲ್ಲ. ಕಾರಣ ಈ ಹಿಂದೆ ಅನುಸರಿಸುತ್ತಿದ್ದ ಕೆಲವು ಆಚರಣೆಗಳನ್ನು ಕೇವಲ ನಾಮಕಾವಸ್ಥೆಗೆ ಮಾಡುವ ಕಾಲ ಇದಾಗಿದೆ. ಹಿಂದೆ ಮಾಡುತ್ತಿದ್ದ ಬೇವಿನಸೊಪ್ಪಿನ ಗುಡಿಸಲಿನ ಬದಲಾಗಿ ಸೋದರಮಾವನು ಕೇವಲ ಒಂದು ಬೇವಿನ ಕೊಂಬೆಯನ್ನು ತಂದು ಮನೆ ಮುಂದೆ ಇರಿಸುತ್ತಾನೆ. ಕೂಡ್ಲಿಗಿಯಲ್ಲಿ ಬೇಡರು ಈಗ ಸದ್ಯದಲ್ಲಿ ಒಂದು ಮನೆಯಲ್ಲಿ ಹೆಣ್ಣು ಮೈನೆರೆತರೆ ಅವಳನ್ನು ಐದು ದಿನಗಳವರೆಗೆ ಕೂಡಿಸಿ ದಿನಾಲು ಆರತಿ ಮಾಡುತ್ತಾರೆ. ಅವಳ ಜೊತೆಗೆ ಇನ್ನು ಚಿಕ್ಕಳಿರುವ ಅವಳ ಸಹೋದರಿಯನ್ನು ಕೂಡಿಸುತ್ತಾರೆ. ಐದನೇ ದಿನ ಅಥವಾ ಕೊನೆಯ ದಿನದಂದು ಅವಳಿಗೆ 'ಎಬ್ಬಿಸುವ' ಕಾರ್ಯಕ್ರಮವನ್ನು ಮಾಡುತ್ತಾರೆ. ಅಂದಿನ ದಿನ ಅವರು ಗಂಗೆಪೂಜೆ ಎಂದು ಮಾಡುತ್ತಾರೆ. ಹತ್ತಿರದ ಬಾವಿಯಿಂದ ಪೂಜೆಮಾಡಿ ನೀರು ತುಂಬಿದ ಕೊಡವನ್ನು ಅವಳ ತಲೆ ಮೇಲೆ ಹೊರಿಸಿ ವಾದ್ಯಗಳೊಂದಿಗೆ ಮನೆವರೆಗೆ ಕರೆದುಕೊಂಡು ಬಂದು ಬಾಗಿಲಲ್ಲಿ

ಕೊಡಕ್ಕೆ ಪೂಜೆಮಾಡಿ ಒಳಕ್ಕೆ ಕರೆದುಕೊಳ್ಳುತ್ತಾರೆ. ರಾತ್ರಿ ಮನೆ ಮುಂದೆ ಸಿಂಗಾರ ಮಾಡಿ ವಿದ್ಯುತ್ ದೀಪಗಳಿಂದ, ಸೀರೆಗಳಿಂದ ಅವಳನ್ನು ಕೂಡಿಸುವ ಜಾಗವನ್ನು ಅಲಂಕಾರ ಮಾಡುತ್ತಾರೆ. ಈ ಊರಿನ ಒಂದು ವಿಶೇಷತೆ ಎಂದರೆ ಅಂದಿನ ದಿನ ಮೊಂಡರು ಬಳಿಗೆ ಸೇರಿದ ಮ್ಯಾಸಬೇಡರು ಮಾಂಸದ ಅಡಿಗೆ ಮಾಡಿಸುವುದು ಇವರನ್ನು ಬಿಟ್ಟರೆ ಬೇರೆ ಯಾರು ಮಾಡಿಸುವುದಿಲ್ಲ. ಈ ಹಿಂದೆ ಬೇಡರಲ್ಲಿ ಇದ್ದ ಒಂದು ಪದ್ಧತಿ ಋತುಮತಿಯಾದ ಹೆಣ್ಣನ್ನು ಒಳಗೆ ಕರೆದುಕೊಳ್ಳುವಾಗ ಅವಳ ನಾಲಿಗೆಯನ್ನು ಬೇವಿನ ಕಡ್ಡಿಯಿಂದ ಸುಡುತ್ತಿದ್ದರು. ಅದು ಇಂದಿಗು ಇದೆ. ಆದರೆ ಅಷ್ಟೊಂದು ಕಟ್ಟುನಿಟ್ಟಾಗಿಲ್ಲ. ''ಹನ್ನೊಂದನೇ ದಿನ ವಾದ್ಯ ಸಮೇತ ಊರ ಹೊರಗೆ ಕರೆದುಕೊಂಡು ಹೋಗಿ ತಂಗಟೆ ಗಿಡ ಮುಟ್ಟಿಸುತ್ತಾರೆ.''[೪] ಇದು ಸದ್ಯ ಮಾಯವಾಗುತ್ತಿದೆ. ಏಕೆಂದರೆ ಊರಿನ ಸುತ್ತ ಹಿಂದೆ ಸಿಗುತ್ತಿದ್ದಂತೆ ತಂಗಟೆ ಗಿಡಗಳು ಸಿಗುವುದಿಲ್ಲ. ಇವುಗಳನ್ನು ಹುಡುಕಿಕೊಂಡು ಮೈಲಿಗಟ್ಟಲೇ ದೂರ ಹೋಗಬೇಕಾಗುವುದು ಆದಕಾರಣ ಇದನ್ನು ಕೆಲವರು ಕೈಬಿಟ್ಟಿದ್ದಾರೆ. ಬಂಧುಗಳಿಗೆ ಕರೆದು ಊಟಹಾಕುವ ಪದ್ಧತಿ ಕೈಬಿಟ್ಟಿಲ್ಲ ಮುಂದೆ ಬಿಡುವುದೂ ಇಲ್ಲ. ಏಕೆಂದರೆ ಇಂದು ಇದು ಒಂದು ರೀತಿಯಲ್ಲಿ ಗೌರವದ ಪ್ರಶ್ನೆಯಾಗಿದೆ. ಅಂದು ನಾವು ಊಟ ಹಾಕಿಸದಿದ್ದರೆ ಅಕ್ಕಪಕ್ಕದವರು ನಮ್ಮನ್ನು ನಿಂದಿಸುತ್ತಾರೆ, ಹಂಗಿಸುತ್ತಾರೆ ಎಂಬ ಪ್ರಶ್ನೆ ಅವರಿಗಿದೆ. ಇದು ಸಾಮಾನ್ಯವಾಗಿ ಮ್ಯಾಸಬೇಡರು ಹಾಗೂ ಊರುಬೇಡರಲ್ಲಿ ಒಂದೇ ರೀತಿಯ ಆಚರಣೆಗಳು ಕಂಡುಬರುತ್ತವೆ. ಆದರೆ ಊರುಬೇಡರಲ್ಲಿ ಬೇವಿನಕೊಂಬೆ ತರುವ ಪದ್ಧತಿ ಮಾತ್ರ ಇಲ್ಲ. ಬೇರೆಲ್ಲ ಆಚರಣೆಗಳಲ್ಲಿ ಇವರು ಸಾಮ್ಯತೆ ಹೊಂದಿದ್ದಾರೆ. ಈ ಹಿಂದ ಎರಡೂ ಪಂಗಡದವರು ರಾತ್ರಿಯಲ್ಲಿ ಓಣಿಯ ಜನ ಸೇರಿಕೊಂಡು ಋತುಮತಿ ಕಾರ್ಯ ಮುಗಿಯುವವರೆಗೂ ಪದಗಳನ್ನು ಹಾಡುತ್ತಿದ್ದರು. ಆದರೆ ಇಂದು ಇವರ ಕೆಲಸವನ್ನು ಧ್ವನಿವರ್ಧಕಗಳು ನಿರ್ವಹಿಸುತ್ತಿವೆ ಇದರಿಂದಾಗಿ ಹಾಡು ಹೇಳುವ ಮುದುಕಿಯರ ಬಾಯಿಗೆ ಬೀಗ ಹಾಕಿದಂತಾಗಿದೆ. ''ಆಗಿನಂಗ ಈಗ ಹಾಡು ಗೀಡು ಹೇಳುವುದಿಲ್ಲ ಈಗ ಎಲ್ಲಿ ನೋಡಿದ್ರೆ ಮೈಕ್ ಸೆಟ್ಟುಗಳು ಬಂದಾವ'' ಎಂಬುದು ವಕ್ತೃವಿನ ಅಭಿಪ್ರಾಯವಾಗಿದೆ. ಇಂತಹ ಸಂದರ್ಭಗಳಲ್ಲಿ ಇಲ್ಲಿ ಈ ಎರಡೂ ಪಂಗಡಗಳು ಭೇದವಿಲ್ಲದೆ ಸೇರಿ ಆಚರಿಸುತ್ತಾರೆ. ಪರಸ್ಪರ ಒಬ್ಬರಿಗೊಬ್ಬರು ಸಹಾಯ ಮಾಡುತ್ತಾರೆ. ಈಗ ಇಲ್ಲಿ ನಾವು ಮ್ಯಾಸನಾಯಕರು, ನಾವು ಊರುನಾಯಕರು ಎಂಬ ಮಾತೇ ಬರುವುದಿಲ್ಲ. ಎಲ್ಲರೂ ಕೂಡಿ ಇಂತಹ ಕಾರ್ಯಕ್ರಮಗಳನ್ನು ನೆರವೇರಿಸುತ್ತಾರೆ. ಹೀಗೆ ಇವರು ಈ ಮೂಲಕ ಮಿಲನವಾಗುತ್ತಿರುವುದು ಬದಲಾವಣೆಯಲ್ಲದೇ ಬೇರಲ್ಲ ಎಂದು ಹೇಳಬಹುದು.

**ಮರಣ**

ಸತ್ತವರನ್ನು ಹೂಳುವ ಪದ್ಧತಿ ಬೇಡರಲ್ಲಿ ರೂಢಿಯಲ್ಲಿದೆ. ಸುಡುವುದು ತೀರಾ ಅಪರೂಪ. ತೊನ್ನು, ಬಾಣಂತಿ ಇಂತಹ ವ್ಯಕ್ತಿಗಳು ಸತ್ತಾಗ ಸುಡುವ ಪದ್ಧತಿ ಇಲ್ಲಿದೆ. ''ಮನುಷ್ಯ ಮರಣ ಸನ್ನಿಹಿತನಾಗುತ್ತಿದ್ದಾನೆ ಎಂದು ಗೊತ್ತಾದಾಕ್ಷಣ ಗುಡಿಸಲ ಹೊರಭಾಗಕ್ಕೆ ಸಾಗಿಸುತ್ತಾರೆ.''[೫] ಈ ಪದ್ಧತಿ ಈಗ ಬದಲಾಗಿದೆ. ಬೇಡರ ಎರಡೂ ಪಂಗಡಗಳಲ್ಲಿ ಸತ್ತವ್ಯಕ್ತಿಯನ್ನು ಮನೆಯ ಹೊರಗೆ ಇಡುವುದಿಲ್ಲ. ಒಂದು ವೇಳೆ ವ್ಯಕ್ತಿ ಮನೆ ಹೊರಗಡೆ ಸತ್ತರೆ ಅವನನ್ನು ಮನೆಯೊಳಗೆ ತಂದು ಮಲಗಿಸುತ್ತಾರೆ. ಪರಸ್ಪರ ಒಬ್ಬರಿಗೊಬ್ಬರು ಏನೇ ದ್ವೇಷ ಅಸೂಯೆ ಇದ್ದರೂ ಸಹ ಶವಸಂಸ್ಕಾರದಲ್ಲಿ ಭಾಗವಹಿಸುತ್ತಾರೆ. ''ಊರನಾಯಕರಲ್ಲಿ ಶವವನ್ನು

ಮನೆಯ ಹೊರಗೆ ಕಟ್ಟೆಯಮೇಲೆ ಮಲಗಿಸುತ್ತಾರೆ.''[೬] ಪ್ರಸ್ತುತ ದಿನಗಳಲ್ಲಿ ಈ ರೀತಿ ಶವವನ್ನು ಹೊರಗೆ ಮಲಗಿಸುವ ರೂಢಿ ಇಲ್ಲಿ ಕಾಣಸಿಗುವುದಿಲ್ಲ. ಸತ್ತ ವ್ಯಕ್ತಿಯನ್ನು ಒಂದು ರಾತ್ರಿ ಇಟ್ಟುಕೊಳ್ಳುವ ಪರಿಸ್ಥಿತಿ ಬಂದರೆ ಇವರು ಶವದ ಮುಂದೆ ಭಜನೆ ಮಾಡುತ್ತಾ ರಾತ್ರಿಪೂರ ಜಾಗರಣೆ ಮಾಡುತ್ತಾರೆ. ಇನ್ನೂ ಸ್ಮಶಾನಕ್ಕೆ ಒಯ್ಯುವಾಗ ಸಾಮಾನ್ಯವಾಗಿ ಎಲ್ಲರೂ ತಮ್ಮ ಪ್ರದೇಶದಲ್ಲಿ ವಾಸಿಸುತ್ತಿರುವ ಹರಿಜನರಿಗೆ ಹೇಳಿ ಹಲಗೆ ವಾದ್ಯವನ್ನು ಬಡಿಸುತ್ತಾರೆ. ಇನ್ನು ಸತ್ತ ವ್ಯಕ್ತಿ ವೃದ್ಧರಾಗಿದ್ದರೆ ಶವಯಾತ್ರೆಗೆ ಬ್ಯಾಂಡುಗಳನ್ನು ಬಾರಿಸುವ ಪದ್ಧತಿ ಇದೆ. ಸ್ಮಶಾನದಲ್ಲಿ ಹರಿಜನರು ಅಥವಾ ಮಾದಿಗರು ಬಂದು ಸಮಾಧಿಗೆ ಜಾಗವನ್ನು ಅಳತೆ ಮಾಡಿಕೊಡುತ್ತಾರೆ. ಅಲ್ಲಿವರೆಗೂ ಗುಂಡಿ ತೋಡುವುದಿಲ್ಲ. ಇದರಿಂದ ಬೇಡರು ತಮ್ಮ ಕೆಲವು ಆಚರಣೆಗಳಿಗೆ ಈಗ ಇತರೆ ಸಮುದಾಯದವರನ್ನು ಅವಲಂಬಿಸಿದ್ದಾರೆ ಎಂದು ಗೊತ್ತಾಗುತ್ತದೆ. ಇವರು ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಲು ಹೆಚ್ಚಾಗಿ ಕಟ್ಟಿಗೆ ಬಿದಿರು ಇವುಗಳಿಂದ ಸಿದಿಗೆ ತಯಾರಿಸುತ್ತಾರೆ. ನಂತರ ಅದನ್ನು ಅಲ್ಲಿಯೇ ಬಿಟ್ಟು ಬರುತ್ತಾರೆ. ಬೇಡರು ಮದುವೆ ಆಗಿರುವವನನ್ನು ಅಂಗಾತವಾಗಿ, ಮದುವೆ ಆಗದಿರುವವನನ್ನು ಬೋರಲಾಗಿ ಮಲಗಿಸುವ ರೂಢಿ ಸಂಪೂರ್ಣ ವಿನಾಯಿತಿ ಪಡೆದು ಎಲ್ಲರನ್ನು ಅಂಗಾತವಾಗಿ ಮಲಗಿಸಿ ಮಣ್ಣು ಮಾಡುತ್ತಾರೆ. ಆದರೆ ನಾಮ ಮಾತ್ರಕ್ಕೆ ಮದುವೆ ಆಗದಿದ್ದವರನ್ನು ಸ್ವಲ್ಪ ಓರೆಯಾಗಿಟ್ಟು ಮಣ್ಣು ಮಾಡುವ ಕ್ರಮವನ್ನು ಅನುಸರಿಸುತ್ತಾರೆ. ಸಮಾಧಿಗೆ ಶಾಶ್ವತವಾಗಿ ನಿಲ್ಲುವಂತಹ ಕಲ್ಲುಗಳನ್ನು ಈಗಲೂ ನೆಡುತ್ತಾರೆ. ಕೆಲವರು ಸಮಾಧಿಕಟ್ಟೆಗಳನ್ನು ಕಟ್ಟಿಸಿರುವ ಉದಾಹರಣೆಗಳಿವೆ. ಶವಸಂಸ್ಕಾರ ಮಾಡಿದ ಮೇಲೆ ಎಲ್ಲರೂ ಬಂದು ಸತ್ತ ವ್ಯಕ್ತಿ ಮನೆಯಲ್ಲಿ ಹಚ್ಚಿದ ದೀಪವನ್ನು ನೋಡಿ ಸ್ನಾನ ಮಾಡಿದ ನಂತರ ಮನೆಯೊಳಗೆ ಪ್ರವೇಶ ಮಾಡುತ್ತಿದ್ದರು. ಈಗ ಕೆಲವರು ಆ ದೀಪವನ್ನು ನೋಡದೆ ಸ್ನಾನಮಾಡಿ ಮನೆಗೆ ಹೋಗುತ್ತಾರೆ. ಇನ್ನು ಕೂಳು ಒಯ್ಯುವುದು ಹಾಗೂ 'ತಲೆಗೋಳು' ಕೊಡುವ ಪದ್ಧತಿಗಳನ್ನು ಕೈಬಿಟ್ಟಿಲ್ಲ ಅವು ತಮ್ಮ ಬೇರನ್ನು ತುಂಬಾ ಆಳವಾಗಿ ಬಿಟ್ಟಿವೆ. ಶವಕ್ಕೆ ಗೌರವ ಕೊಡುವುದನ್ನು ಮರೆತಿಲ್ಲ. ಶವಸಂಸ್ಕಾರದಲ್ಲಿ ಎಲ್ಲ ಜಾತಿ, ಜನಾಂಗದ ಜನರೂ ಪಾಲ್ಗೊಳ್ಳುತ್ತಾರೆ. ಈಗ ಇದಕ್ಕೆ ಯಾವ ನಿಷೇಧಗಳೂ ಇಲ್ಲ.

ಇನ್ನೂ ಸತ್ತ ಮೇಲೆ ತಿಥಿ, ಶ್ರಾದ್ಧ ಇವುಗಳನ್ನು ಚಾಚು ತಪ್ಪದೇ ಮಾಡುತ್ತಾರೆ. ಸತ್ತ ಮೂರು ದಿನಗಳಲ್ಲಿ 'ಮೂರು ದಿವಸದ ಕಾರ್ಯವು' ಎಂದು ಮಾಡುತ್ತಾರೆ. ಅಂದು ಮನೆಯವರೆಲ್ಲರೂ ಸೇರಿ ಒಂದು ಕುರಿಯನ್ನು ತಂದು ಅದರ ಮಾಂಸ ಅಡುಗೆ ಮಾಡಿ ಅವರ ಅಣ್ಣ ತಮ್ಮಂದಿರೆಲ್ಲ ಸೇರಿ ಊಟ ಮಾಡುತ್ತಾರೆ. ಇನ್ನೂ ಕೂಳು ತೆಗೆದುಕೊಂಡು ಹೋಗುವ ಕ್ರಮ ಅನುಸರಿಸುತ್ತಿರುವುದು ಇಂದಿಗೂ ಕಂಡುಬರುತ್ತದೆ. ಈ ಹಿಂದೆ ಮೂರನೇ ದಿನದಂದು ಮಾಡಿದ ಮಾಂಸದ ಅಡುಗೆ ಅಂದೇ ತಿಂದು ಮುಗಿಸಬೇಕು ಉಳಿದಿದ್ದನ್ನು ಹೊರಗೆ ಚೆಲ್ಲದೆ ಮನೆಯಲ್ಲಿಯೇ ಗುಂಡಿತೋಡಿ ಮುಚ್ಚಬೇಕಾಗಿತ್ತು. ಆದರೆ ಈ ಕ್ರಮ ಬದಲಾಗಿದೆ ಏಕೆಂದರೆ ಆಗ ಗುಡಿಸಲುಗಳಿದ್ದವು ನೆಲತೋಡಿ ಮುಚ್ಚುತ್ತಿದ್ದರು. ಆದರೆ ಒಂದು ವೇಳೆ ಬಂಡೆಗಳು, ಟೈಲ್ಸ್‌ಗಳು ಹಾಕಿದ ಮನೆಯಲ್ಲಿ ಸತ್ತರೆ ಆಗ ಅಂದು ಬಂಡೆ ಒಡೆದು ಮುಚ್ಚಲಾರದೆ ಇರುವಲ್ಲಿ ಸಂದೇಹವಿಲ್ಲ ಆಗ ಅನಿವಾರ್ಯವಾಗಿ ಅದನ್ನು ಹೊರಗೆ ಎಸೆಯಬೇಕಾಗುತ್ತದೆ.

ನಂತರ ಮಾಡುವ ಕ್ರಮ 'ದಿವಸ' ಅಥವಾ ಒಳಗೆ ತೆಗೆದುಕೊಳ್ಳುವ ಆಚರಣೆ ಇನ್ನೂ ಅನುಸರಿಸುತ್ತಿದ್ದಾರೆ. ಇದರಲ್ಲಿ ಎರಡು ಮಾತಿಲ್ಲ ಅಂದು ಮನೆಯೊಳಗೆ ತಾಮ್ರದ ಚರಿಗೆಯನ್ನಿಟ್ಟು ಪೂಜೆ

ಮಾಡಿ ಸಿಹಿ ಊಟ ಮಾಡಿಸಿ ಬಳಗದವರನ್ನೆಲ್ಲ ಊಟಕ್ಕೆ ಕರೆಯುತ್ತಾರೆ. ಅಂದು ಬಂದ ಜನರೆಲ್ಲ ಆ ಚರಿಗೆಗೆ ಕೈ ಮುಗಿದು ಲೋಭಾನ ಹಾಕಿ ಊಟ ಮಾಡಬೇಕು. ಸ್ವಲ್ಪ ದಿನಗಳ ಹಿಂದೆ ಪೂಜೆಗೆ ಮಣ್ಣಿನ ಮಗಿಗಳನ್ನು ಇಡುತ್ತಿದ್ದರು. ಮರಣ ಸಂಸ್ಕಾರಕ್ಕೆ ಸಂಬಂಧಿಸಿದಂತೆ ಬೇಡರಲ್ಲಿ ಅಷ್ಟೇನು ಪರಿವರ್ತನೆಗಳಾಗಿಲ್ಲ. ಕೇವಲ ಕೆಲವೇ ಅಂಶಗಳಲ್ಲಿ ಮಾತ್ರ ನಾವು ಆಧುನಿಕತೆಯನ್ನು ಕಾಣುತ್ತೇವೆ. ಇನ್ನೂ ಸತ್ತವರ ಬಗ್ಗೆ ಇವರಿಗೆ ಹಿಂದೆ ನಂಬಿಕೆ ಕಡಿಮೆ ಆಗಿದೆ. ಆಗ ಸತ್ತವರು ದೆವ್ವ, ಪೀಡೆಗಳಾಗಿ ಬಂದು ಕಾಡುತ್ತಾರೆ ಎಂಬ ನಂಬಿಕೆ ಬಿಟ್ಟಿದ್ದಾರೆ. ಸುಮಾರ ವರ್ಷಗಳ ಹಿಂದೆ ಕೆಲವು ವ್ಯಕ್ತಿಗಳು ನಮ್ಮ ಮೈಯೊಳಗೆ ಸತ್ತ ನನ್ನ ತಂದೆ, ತಾಯಿ, ಅಜ್ಜ ಹೀಗೆ ಸಂಬಂಧಿಕರು ಬರುತ್ತಾರೆಂದು ನಂಬಿ ಹೀಗೆ ಆಡಿದವರಿಗೆ ತಮ್ಮ ಪಕ್ಕದಲ್ಲಿಯೇ ಇರುವ ದೆವ್ವ ಬಿಡಿಸುವವರನ್ನು ಕರೆದುಕೊಂಡು ಬಂದ ಬಾರುಕೋಲಿನಿಂದ ಹೊಡೆಸುತ್ತಿದ್ದ ಘಟನೆಗಳು ಆಗಾಗ ನಡೆಯುತ್ತಿದ್ದವು ಆದರೆ ಇತ್ತೀಚೆಗೆ ಅಂತಹ ಪ್ರಕರಣಗಳು ಕಾಣುವುದಿಲ್ಲ. ಅಂದರೆ ಇಲ್ಲಿ ಸದ್ಯ ಬೇಡರಿಗೆ ದೆವ್ವ, ಭೂತ ಮೊದಲಾದವುಗಳು ಬಗ್ಗೆ ನಂಬಿಕೆ ಹೊರಟುಹೋಗಿದೆ. ಕೆಲವು ಆರ್ಥಿಕವಾಗಿ ಮುಂದುವರೆದ ಕುಟುಂಬಗಳ ವರ್ಷಕ್ಕೊಮ್ಮೆ 'ತಿಥಿ' ಮಾಡುತ್ತಾರೆ. ಬಡಜನರು ಸಹ ಈ ಪದ್ಧತಿಯನ್ನು ಹಿರಿಯರ ಹಬ್ಬದ ರೂಪದಲ್ಲಿ ಮಾಡುತ್ತಾ ಬಂದಿದ್ದಾರೆ. ಹೆಚ್ಚಾಗಿ ಇಲ್ಲಿನ ಬೇಡರು ಈ ಹಬ್ಬದ ದಿನದಂದೇ ತಮ್ಮ ಹಿರಿಯರಿಗೆ ಗೌರವ ಸಲ್ಲಿಸುತ್ತಾರೆ. ಇದನ್ನು ನೋಡಿದಾಗ ಬೇಡರಲ್ಲಿ ಹಬ್ಬ ಜಾತ್ರೆಗಳಲ್ಲಿ ಯಾವ ರೀತಿಯ ಬದಲಾವಣೆಗಳೂ ಆಗಿಲ್ಲ ಎಂದು ತೋಚುತ್ತದೆ.

### ೫.೪ ಹಬ್ಬಗಳು

ಸಂಸ್ಕೃತಿ ಬೆಳೆದದ್ದೇ ಹಬ್ಬಗಳಿಂದ ಹಾಗೂ ಹಬ್ಬಗಳನ್ನು ಆಚರಿಸುವುದರಿಂದ. ಇನ್ನು ವಿಶೇಷವೆಂದರೆ ಬುಡಕಟ್ಟು ಜನರ ಸಂಸ್ಕೃತಿ ಒಂದು ವಿಶೇಷ ಸಂಸ್ಕೃತಿ ಎಂದು ತೋರಿಸಿಕೊಡುವುದೇ ಹಬ್ಬ, ಆಚರಣೆಗಳು. ಇಂದಿನ ಈ ಆಧುನಿಕ ಯುಗದಲ್ಲೂ ಇವುಗಳಿಗಿರುವ ಮಹತ್ವ ಕಡಿಮೆಯಾಗಿಲ್ಲ. ಎಂತಹ ಕಷ್ಟದ ಪರಿಸ್ಥಿತಿ ಇದ್ದರೂ ಸಹ ಹಬ್ಬಗಳನ್ನು ಆಚರಿಸುವುದು ಮಾತ್ರ ನಿಲ್ಲುವುದಿಲ್ಲ. ಬೇರೆ ಯಾವ ವಿಷಯಗಳಿಗೆ ಹಣ ಕ್ರೋಢೀಕರಣವಾಗದಿದ್ದರೂ ಹಬ್ಬಕ್ಕೆ ತಮಗರಿವಿಲ್ಲದೇ ಹಣ ಜಮಾವಣೆಯಾಗುವುದು ಆಶ್ಚರ್ಯಕರವಾದ ಸಂಗತಿ. ''ಹತ್ತಾರು ಆಚರಣೆಗಳನ್ನು ಅವರು ವರ್ಷ ಪರ್ಯಂತ ಆಚರಿಸುತ್ತಿದ್ದರೂ ನಿಗದಿಯಾದ ದಿವಸದ ಆಚರಣೆಗಳು ಹಬ್ಬವಾಗಿ ಮಾರ್ಪಟ್ಟಿವೆ'' [೬] ಎಂಬ ಮಾತು ಸತ್ಯವಾಗಿದೆ. ಜನರು ವರ್ಷಪೂರ್ತಿ ಅಮವಾಸ್ಯೆ, ಹುಣ್ಣಿಮೆ ಹೀಗೆ ಆಚರಿಸುತ್ತಲೇ ಇರುತ್ತಾರೆ. ಇನ್ನು ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಹಬ್ಬಗಳು ಮತ್ತು ಜಾತ್ರೆಗಳು ಒಟ್ಟೊಟ್ಟಿಗೆ ನಡೆಯುತ್ತವೆ. ಆದರೆ ನಗರ ಪ್ರದೇಶಗಳಲ್ಲಿ ಜಾತ್ರೆಗಳಿಗೆ ಸ್ವಲ್ಪ ಬರ ಎಂಬಂತಿದೆ.

ಇನ್ನು ಕೂಡ್ಲಿಗಿ ಬೇಡರಲ್ಲಿ ಹಬ್ಬಗಳು ಹಾಗೂ ಜಾತ್ರೆಗಳಿಗೆ ಕಡಿಮೆ ಇಲ್ಲ. ಇಂದು ವರ್ಷದಲ್ಲಿ ಬರುವ ಎಲ್ಲಾ ಹಬ್ಬಗಳನ್ನು ಚಾಚು ತಪ್ಪದೇ ಆಚರಿಸುತ್ತಾರೆ. ಇವುಗಳಲ್ಲಿ ಬೇಡರಿಗೆ ಸೀಮಿತವಾದ ಕೆಲವು ಹಬ್ಬಗಳೊಂದಿಗೆ ಊರಿನಲ್ಲಿ ಇತರರು ಆಚರಿಸುವ ಹಬ್ಬಗಳನ್ನು ಒಂದು ವೇಳೆ ಅವರೇ ಆಚರಿಸದಿದ್ದರೂ ಬೇಡರು ಮಾತ್ರ ಬಹಳ ನಿಷ್ಠೆಯಿಂದ ಆಚರಿಸುವುದನ್ನು ಕಾಣುತ್ತೇವೆ. ಇಂತಹ ಹಬ್ಬಗಳಿಗೆ ಸಂಬಂಧಿಸಿದಂತೆ ಕೇವಲ ಕೆಲವೇ ಅಂಶಗಳಲ್ಲಿ ಮಾತ್ರ ಪರಿವರ್ತನೆ ಆಗಿರುವುದನ್ನು ಗಮನಿಸಬಹುದು. ಹಬ್ಬ, ಜಾತ್ರೆ ಇಂತಹ

ವಿಷಯಗಳಿಗೆ ಇಲ್ಲಿನ ಬೇಡರು ಹೆಚ್ಚು ಆದ್ಯತೆ ನೀಡಿದ್ದಾರೆ. ಇದರಲ್ಲಿ ಬಡವರು ಶ್ರೀಮಂತರು ಎಂಬ ಭೇದವಿಲ್ಲ. ಏನು ಇಲ್ಲದ ವ್ಯಕ್ತಿಗಳೂ ಸಹ ಹಬ್ಬಕ್ಕಾಗಿ ಸಾಲವಾದರೂ ಮಾಡಿ ತಮ್ಮ ಮನೆಯಲ್ಲಿ ಹಬ್ಬವನ್ನು ಆಚರಿಸುತ್ತಾರೆ. ಕೂಡ್ಲಿಗಿ ಸುತ್ತಮುತ್ತ ಕೆಲವು ಪ್ರಸಿದ್ಧಿ ಪಡೆದ ದೇವರ ಜಾತ್ರೆ ಹಾಗೂ ರಥೋತ್ಸವಗಳು ವರ್ಷಕ್ಕೊಮ್ಮೆ ಜರುಗುತ್ತವೆ. ಅವುಗಳಲ್ಲಿ ಬೇಡರು ಭಾಗವಹಿಸುತ್ತಾರೆ. ಮೂಲವಾಗಿ ಬೇಡರು ಶೈವ ಪಂಥದವರಾಗಿದ್ದರು. ಹೆಚ್ಚಾಗಿ ಇವರಿಗೆ ಶಿವ ಹಾಗೂ ಶಿವನ ರೂಪದ ದೇವತೆಗಳು ಆರಾಧ್ಯ ದೈವವಾಗಿದ್ದವು. ಆದರೆ ಇಂದು ಇವರಲ್ಲಿ ವೈಷ್ಣವ ಪಂಥದ ದೇವರ ಹಬ್ಬಗಳನ್ನು ಆಚರಿಸುವುದರಲ್ಲಿ ಮುಂದಾಗಿದ್ದಾರೆ. ಉದಾಹರಣೆಗೆ ಕೂಡ್ಲಿಗಿ ಪಕ್ಕದಲ್ಲಿಯೇ ಇರುವ ಕೊಟ್ಟೂರು ಶ್ರೀ ಕೊಟ್ಟೂರೇಶ್ವರ, ಅಥವಾ ಬಸವೇಶ್ವರ, ಉಜ್ಜಿನಿಯ ತೇರು, ಮೊರಬದ ವೀರಭದ್ರ ಇತ್ಯಾದಿ ಇವು ಜಾತ್ರೆಗಳಿಗೆ ಸಂಬಂಧಿಸಿದಂತ ಆಯಿತು. ಇನ್ನು ಹಬ್ಬಗಳಿಗೆ ಸಂಬಂಧಿಸಿದಂತೆ ಕೆಲವು ವಿಶೇಷವಾದ ಆಧುನಿಕ ರೀತಿಯ ಕೆಲವು ಹಬ್ಬಗಳನ್ನು ಇಲ್ಲಿ ಆಚರಿಸುತ್ತಾರೆ. ಅವುಗಳೆಂದರೆ ದೀಪಾವಳಿ, ಮೊಹರಂ, ಗಣೇಶ, ಹೋಳಿ, ಗೌರಿಹಬ್ಬ ಇತ್ಯಾದಿಗಳಾಗಿವೆ. ಇನ್ನು ಮುಂದೆ ಬೇಡರಿಗೆ ಸಂಬಂಧಿಸಿದ ಹಬ್ಬಗಳಲ್ಲಿನ ಬದಲಾವಣೆ ಹಾಗೂ ಈ ಹಬ್ಬಗಳನ್ನು ಯಾವ ರೀತಿ ಆಚರಿಸುತ್ತಾರೆ ಎಂಬುದನ್ನು ನೋಡೋಣ.

**ಯುಗಾದಿ**

ಅಲೆಮಾರಿಗಳಾಗಿದ್ದ ಬೇಡರಲ್ಲಿ ದೀಪಾವಳಿ, ಯುಗಾದಿ, ವಿನಾಯಕ ಚೌತಿ ಇಂತಹ ಹಬ್ಬಗಳು ಆಚರಿಸಲ್ಪಡುವುದಿಲ್ಲ ಎಂಬುದಾಗಿ ಉಪಸಂಸ್ಕೃತಿ ಮಾಲೆಯಲ್ಲಿ ಉಲ್ಲೇಖಿಸಲಾಗಿದೆ. ಆದರೆ ಇಂದು ಯುಗಾದಿಯನ್ನು ದೊಡ್ಡ ಹಬ್ಬ ವರ್ಷದಲ್ಲಿ ಬರುವ ಹೊಸ ಹಬ್ಬ ಎಂಬ ಅಭಿಪ್ರಾಯ ತಳೆದಿದ್ದಾರೆ. ಅದೇ ಪುಟದಲ್ಲಿ ಈಗೀಗ ಹಟ್ಟಿಯೊಳಗಿನ ಬೇಡರು ಗ್ರಾಮ, ಪಟ್ಟಣಗಳ ನಾಗರೀಕತೆ ಪ್ರಭಾವದಿಂದ ಎಲ್ಲರೂ ಆಚರಿಸುವ ಹಬ್ಬಗಳನ್ನು ಆಚರಿಸುವಲ್ಲಿ ಮುಂದಾಗಿದ್ದಾರೆ ಎಂಬ ಮಾತು ಈಗ ಸಮರ್ಥವಾಗಿದೆ. ಇಲ್ಲಿನ ಬೇಡರು ಯುಗಾದಿ ಹಬ್ಬವನ್ನು ವಿಜೃಂಭಣೆಯಿಂದ ಮಾಡುತ್ತಾರೆ.

ಯುಗಾದಿ ಹಬ್ಬದ 'ಪಾಡ್ಯ'ದ ದಿನ ಇವರು ಪ್ರತಿಯೊಬ್ಬರು ತಮ್ಮ ತಮ್ಮ ಮನೆಗಳಿಗೆ ಮಾವಿನ ತೋರಣಗಳನ್ನು ಕಟ್ಟುತ್ತಾರೆ ಹಾಗೂ ಅವುಗಳಲ್ಲಿ ಅದೇ ತಾನೆ ಬಲಿಯಲು ಪ್ರಾರಂಭವಾಗಿರುವ ಮಾನವಿಕಾಯಿ, ಬೇವಿನ ಎಲೆಗಳನ್ನು ಅದರಲ್ಲಿ ಸೇರಿಸುತ್ತಾರೆ. ಹಾಗೂ ಮನೆಯಲ್ಲಿ ನೀರನ್ನು ಬಿಸಿಮಾಡಿ ಅದರಲ್ಲಿ ಬೇವಿನ ಎಲೆಗಳನ್ನು ಹಾಕಿ ಕೆಲವರು ಎಣ್ಣೆ ಬೆರೆಸಿಕೊಂಡು ಜಳಕ ಮಾಡುತ್ತಾರೆ. ಬೆಳೆಗಳು ಚೆನ್ನಾಗಿದ್ದು ಆರ್ಥಿಕವಾಗಿ ಚೆನ್ನಾಗಿದ್ದರೆ ಮನೆಯವರೆಲ್ಲ ಹೊಸ ಬಟ್ಟೆಗಳನ್ನು ಹೊಲಿಸಿ ಹಾಕಿಕೊಳ್ಳುತ್ತಾರೆ. ಇನ್ನೂ ಕೆಲವರು ತಮ್ಮ ಹಿರಿಯರ ನೆನಪಿಗಾಗಿ ಹೊಸ ಬಟ್ಟೆಗಳನ್ನು ಹಾಗೇ ಹಾಕಿಕೊಳ್ಳದೆ ಹಿರಿಯರಿಗೆ ಬಟ್ಟೆ ಏರಿಸಿಕೊಳ್ಳುತ್ತಾರೆ. ಇಲ್ಲಿನ ಬೇಡರ ಕೆಲವು ಕುಟುಂಬಗಳಲ್ಲಿ ಬೇವು ಹಾಗೂ ಬೆಲ್ಲಗಳನ್ನು ಸೇರಿಸಿದ ಪುಡಿಯನ್ನು ಸೇವಿಸುತ್ತಾರೆ. ಅಂದರೆ ಬಾಳಿನಲ್ಲಿ ಕಷ್ಟ ಹಾಗೂ ಸುಖಗಳು ಸಮನಾಗಿ ಬರಲಿ ಎಂಬುದೇ ಇದರ ಮರ್ಮ. ಈ ಹಿಂದೆ ಈ ಹಬ್ಬದಲ್ಲಿ ಬೇಡರು ಚಾಚು ತಪ್ಪದೇ ಬೇಟೆಯಾಡಲು ಹೋಗುತ್ತಿದ್ದರು. ಬರು ಬರುತ್ತಾ ಇದು ಕೇವಲ ನಾಮಮಾತ್ರಕ್ಕೆ ಹೋಗುವಂತಾಯಿತು. ಸದ್ಯ ಸುತ್ತಲೂ ಕಾಡುಗಳು ನಾಶವಾದಂತೆ ಇವರು ಈ ಪದ್ಧತಿ

ಕೈಬಿಡುತ್ತಿದ್ದಾರೆ. ಆದರೆ ಪೂರ್ತಿಯಾಗಿ ಬಿಟ್ಟಿಲ್ಲ ಬಿಡುವುದಿಲ್ಲ. ಇದು ಈಗ ಬೇಡರ ಸಂಪ್ರದಾಯವಾಗಿದೆ. ಈ ಹಬ್ಬದಿಂದಲೇ ಇವರಿಗೆ ಇನ್ನುಳಿದ ಹಬ್ಬಗಳ ಪ್ರಾರಂಭ ಇದು ನಂತರವೇ ನಮ್ಮ ಹಬ್ಬಗಳು ಒಂದಾರ ನಂತರ ಒಂದರಂತೆ ಬರುತ್ತವೆ ಎಂಬುದು ಇವರ ನಂಬಿಕೆ. ಯುಗಾದಿ ಹಬ್ಬವನ್ನು ಬೇಡರು ಕೇವಲ ಇಲ್ಲಿ ಮಾತ್ರವಲ್ಲದೆ ಇತರೆ ಕಡೆಗಳಲ್ಲೆಲ್ಲ ಬಹಳ ಚೆನ್ನಾಗಿ ಆಚರಿಸುತ್ತಾರೆ. ಸುತ್ತಲಿನ ಹಳ್ಳಿಗಳಲ್ಲಿ ಕಾಡು ಅವರಿಗೆ ಹತ್ತಿರವಾಗಿರುವುದರಿಂದ ಅಂದು ಮಾತ್ರ ಅವರು ಬೇಟೆಯಾಡಲು ತಮ್ಮಲ್ಲಿರುವ ಈ ಹಿಂದೆ ಹಿರಿಯರು ಬಳಸುತ್ತಿದ್ದ ಆಯುಧಗಳನ್ನು ಹಿಡಿದು ಕಾಡಿಗೆ ಹೋಗಿ ಕೊನೆಗೆ ಏನಿಲ್ಲವೆಂದರೂ ೨ - ೩ ಮೊಲಗಳನ್ನು ಬೇಟೆಯಾಡಿಕೊಂಡು ಬರುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬೇಟೆಯೇ ಮುಖ್ಯ ಕಸುಬಾಗಿದ್ದ ಇವರಿಗೆ ಇದು ಈಗ ಕೇವಲ ಈ ಹಬ್ಬದ ದಿನದಂದು ನಾಮಮಾತ್ರಕ್ಕೆ ನಡೆಸುವ ಒಂದು ಆಚರಣೆಯಾಗಿ ಪರಿಣಮಿಸಿದೆ.

ಇಂದು ನಾವು ಬಲು ಸಂಭ್ರಮದಿಂದ ಆಚರಿಸುವ ಹೋಳಿ ಹಬ್ಬವನ್ನು ಹಿಂದೆ ಬೇಡರು ಈ ಹಬ್ಬದ ದಿನದ ನಂತರದಲ್ಲಿ ಆಚರಿಸುತ್ತಿದ್ದರು. ಇಂದಿಗೂ ಈ ಊರಲ್ಲಿ ಯುಗಾದಿ ಹಬ್ಬದಲ್ಲಿ 'ಓಕುಳಿ' ಎಂದು ಆಚರಿಸುತ್ತಾರೆ. ಅಂದು ಇಲ್ಲಿನ 'ಮೊಂಡರು' ಬಳಿಗೆ ಸೇರಿದ ವ್ಯಕ್ತಿಗಳು ಮನೆ ಮನೆಗೆ ಬಂದು ಹೋಗುತ್ತಾರೆ. ಅವರು ಅಂದು ಕೈಯಲ್ಲಿ ಒನಕೆ ಹಿಡಿದು ತಲೆಗೆ ಕರಿ ಕಂಬಳಿಯಂತಹ ಬಟ್ಟೆ ಸುತ್ತಿ ಅರೆಬೆತ್ತಲೆಯಾಗಿ ಓಣಿಯೊಳಗೆ ಬಂದು ಹೋಗುತ್ತಾರೆ. ಈ ಹಬ್ಬವನ್ನು ಕೆಲವು ಜನ ಮ್ಯಾಸಬೇಡರಲ್ಲಿ ಹಾಗೂ ಊರುಬೇಡರಲ್ಲಿ ಆಚರಿಸುವುದೇ ಇಲ್ಲ. ಕೆಲವು ಕುಟುಮಬಗಳು ಎರಡು ದಿನಗಳವರೆಗೆ ಅಂದರೆ 'ಮೊಂಡರು' ಮನೆಗಳಿಗೆ ಬಂದುಹೋಗುವವರೆಗೂ ಸ್ನಾನವನ್ನೇ ಮಾಡುವುದಿಲ್ಲ ಇಂತಹ ಪದ್ಧತಿ ಈಗಲೂ ಇದೆ. ಇನ್ನೂ ಕೆಲವು ಜನ ಯುಗಾದಿಯಂದು ಬೇವು ಕಲಿಸುವುದಿಲ್ಲ. ಇಂತಹ ಆಚರಣೆಗಳು ಈಗಲೂ ಇಲ್ಲಿವೆ ಇವೆ. ಇದನ್ನು ನೋಡಿದಾಗ ಹಬ್ಬಗಳಲ್ಲಿ ಅಂತಹ ಮಹತ್ತರ ಬದಲಾವಣೆಗಳಾಗಿರುವುದು ಕಂಡುಬರುವುದಿಲ್ಲ ಆದರೆ ಅವುಗಳ ಆಚರಣಾ ಕ್ರಮದಲ್ಲಿನ ವೆಚ್ಚ ಹೆಚ್ಚಾಗಿವೆ ಎಂದು ಹೇಳಬಹುದು.

**ಶಿವರಾತ್ರಿ**

ಶಿವರಾತ್ರಿ ಇಂದು ಬೇಡರು ಹೆಚ್ಚು ಆಚರಿಸುತ್ತಿರುವ ಹಾಗೂ ಬಹಳ ಹಿಂದಿನ ಕಾಲದಿಂದಲೂ ಈ ಹಬ್ಬವನ್ನು ಆಚರಿಸಿಕೊಂಡು ಬಂದಿದ್ದಾರೆ. ಬೇಡರ ಕಣ್ಣಪ್ಪ ಎಂಬ ಮಹಾಭಕ್ತನ ಹಿನ್ನೆಲೆಯಲ್ಲಿ ಈ ಹಬ್ಬವನ್ನು ಬೇಡರು ಆಚರಿಸುತ್ತಾರೆ. ಏಕೆಂದರೆ ಕಣ್ಣಪ್ಪ ಬೇಡರವನು. ಇಲ್ಲಿ ಈ ಹಬ್ಬವನ್ನು ಸಹ ಬಹಳ ವಿಶೇಷವಾಗಿ ಮಾಡುತ್ತಾರೆ. ಶಿವರಾತ್ರಿ ಅಮವಾಸ್ಯೆ ದಿನದಂದು ಜಾಗರಣೆ ಮಾಡುವುದರ ಮೂಲಕ ಆಚರಿಸುತ್ತಾರೆ. ಅಂದು ಸಂಜೆ ಬೇಡರು ಇಲ್ಲಿರುವ ಶ್ರೀ ರಾಮಲಿಂಗೇಶ್ವರ ಗುಡಿಗೆ ಹೋಗಿ ಹಣ್ಣು ಕಾಯಿಗಳನ್ನು ತಂದು ಪೂಜೆ ಸಲ್ಲಿಸುತ್ತಾರೆ. ಇವರೊಂದಿಗೆ ಊರಿನ ಇತರೆ ಜಾತಿ ಜನಾಂಗದ ಜನರು ದೇವಸ್ಥಾನಕ್ಕೆ ಬರುತ್ತಾರೆ. ಬಹಳ ದಿನಗಳಿಂದಲೂ ಇಲ್ಲಿ ರಾತ್ರಿಯಿಡೀ ಜಾಗರಣೆ ಮಾಡುತ್ತಿದ್ದಾರೆ. ಭಜನಾ ತಂಡಗಳು ಅಂದು ರಾತ್ರಿಯಿಡೀ ತಮ್ಮ ಕಲೆಯನ್ನು ತೋರಿಸುತ್ತಾರೆ. ಉಪವಾಸ ಮಾಡುವುದು ಅಂದಿನ ವಿಶೇಷತೆ. ಆದರೆ ಅದೇ ಸಮಯಕ್ಕೆ ಅಲ್ಪ ಆಹಾರ ಸೇವಿಸುವುದೂ ಗಮನಿಸಬೇಕಾದ ಅಂಶವಾಗಿದೆ.

ಇನ್ನೂ ಕೂಡ್ಲಿಗಿಯಲ್ಲಿರುವ ಶ್ರೀ ಸಿದ್ದೇಶ್ವರ ಬೆಟ್ಟ. ಇಲ್ಲಿನ ಬೇಡರು ಈ ಬೆಟ್ಟದ ಮೇಲೆ ಇರುವ ದೇವಸ್ಥಾನಕ್ಕೆ ಅಂದು ಅಲಂಕಾರ ಮಾಡಿ ಶಿವರಾತ್ರಿ ದಿನದಂದು ಇಲ್ಲಿರುವ ಲಿಂಗಕ್ಕೆ ವಿಶೇಷ ಪೂಜೆ ಮಾಡುತ್ತಾರೆ. ಇದಕ್ಕೆ ಮುಖ್ಯ ನಿರ್ವಹಣಾಕಾರರಾಗಿ ೬ - ೭ ಹಾಗೂ ೮ನೇ ವಾರ್ಡಿನ ಬೇಡ ಜನಾಂಗದವರು ವಹಿಸಿಕೊಳ್ಳುತ್ತಾರೆ. ಅಂದು ಬೆಟ್ಟದ ಮೇಲೆಯೂ ಸಹ ಭಜನಾ ತಂಡಗಳು ಬಂದು ಜಾಗರಣೆ ಮಾಡಿ ಬೆಳಿಗ್ಗೆ ಪ್ರಸಾದ ಸ್ವೀಕರಿಸಿ ಹೋಗುತ್ತಾರೆ. ಇಲ್ಲಿಗೆ ಸಾವಿರಾರು ಜನ ಭಕ್ತಾದಿಗಳು ಬಂದು ಪೂಜೆ ಸಲ್ಲಿಸುತ್ತಾರೆ. ಕೇವಲ ಬೇಡರು ಮಾತ್ರವಲ್ಲದೇ ಈ ಊರಿನಲ್ಲಿರುವ ಇತರೆ ಜನರು ಇಲ್ಲಿಗೆ ಬರುತ್ತಾರೆ. ಬೆಳಿಗ್ಗೆ ಪ್ರಸಾದ ನೀಡುವ ಪದ್ಧತಿ ಇದೆ. ಇದರಿಂದ ನಮಗೆ ಬೇಡರು ಇಂದು ಯಾವ ರೀತಿ ಪರಿವರ್ತನೆಗೆ ಒಳಗಾಗುತ್ತಿದ್ದಾರೆ ಎಂಬುದು ತಿಳಿಯುತ್ತದೆ. ಅಲ್ಲದೆ ಅವತ್ತು 'ದೇವರ ಪಟ' ಹಾಗೂ ಹೂವಿನ ಹಾರಗಳನ್ನು ಹರಾಜು ಮಾಡುತ್ತಾರೆ. ಇದರಿಂದ ಬಂದ ಹಣವನ್ನು ಪ್ರತಿವರ್ಷ ನಡೆಸುವ ಈ ಹಬ್ಬಕ್ಕೆ ಮೀಸಲಾಗಿರಿಸುತ್ತಾರೆ. ಇಲ್ಲಿನ ದೇವಸ್ಥಾನಕ್ಕೆ ಪೂಜಾರಿಯಾಗಿ ಕಳೆದ ೧೦ ವರ್ಷಗಳಿಂದ ಲಿಂಗಾಯತ ಜನಾಂಗದ ವ್ಯಕ್ತಿ ಕೆಲಸ ನಿರ್ವಹಿಸುತ್ತಿದ್ದಾರೆ. ಈ ದೇವಸ್ಥಾನಕ್ಕೆ ಒಂದು ಪೌರಾಣಿಕ ಕಥೆಯೂ ಇದೆ. ಈ ಬೆಟ್ಟದ ಮೇಲೆ ಇರುವ ಲಿಂಗಕ್ಕೂ ಹಾಗೂ ಉಜ್ಜಿನಿಯಲ್ಲಿರುವ ಶ್ರೀ ಮರುಳಸಿದ್ದೇಶ್ವರನಿಗೂ ಸಂಬಂಧಿಸಿದ ಒಂದು ಕಥೆಯೇ ಇದೆ. ಇಲ್ಲಿ ಮ್ಯಾಸಬೇಡರು ಹಾಗೂ ಊರುಬೇಡರು ಸೇರಿ ಹಬ್ಬವನ್ನು ಒಟ್ಟಿಗೆ ಸಂತೋಷದಿಂದ ಆಚರಿಸುತ್ತಾರೆ. ಕೆಲವು ಕಡೆ ಮ್ಯಾಸಬೇಡರು ಶೈವಪಂಥ ಹಾಗೂ ಊರುಬೇಡರು ವೈಷ್ಣವ ಪಂಥದವರು ಎಂದು ಉಲ್ಲೇಖಿಸಲಾಗಿದೆ. ಆದರೂ ಇವರಿಬ್ಬರು ಒಬ್ಬರಿಗೊಬ್ಬರು ಪರಸ್ಪರ ಸಂಧಿಸಿ ಈ ಹಬ್ಬವನ್ನು ಮಾಡುತ್ತಾರೆ. ಇದು ಒಂದು ವಿಶೇಷತೆ.

**ದಸರಾ**

ಈ ಸಮುದಾಯವು ಇಂದು ವಿಶೇಷವಾಗಿ ಆಚರಿಸುವ ಹಬ್ಬವಾಗಿದೆ. ಇದು ಒಂದು ರೀತಿಯಲ್ಲಿ ಹಿರಿಯರನ್ನು ನೆನಪಿಸಿಕೊಳ್ಳುವ ಹಬ್ಬವಾಗಿದೆ. ಇಲ್ಲಿ ಹಿರಿಯರ ಹಬ್ಬಕ್ಕೆ ಹೆಚ್ಚಿನ ಮಹತ್ವ ಕೊಡುತ್ತಾರಾದರೂ ಪ್ರಸ್ತುತ ದಿನಗಳಲ್ಲಿ ಯುಗಾದಿ, ದಸರಾ, ನಾಗರಪಂಚಮಿ ಇವು ನಮಗೆ ದೊಡ್ಡ ಹಬ್ಬ ಎಂಬ ಭಾವನೆ ಬಂದಿದೆ. ಕೂಲಂಕುಷವಾಗಿ ನೋಡಿದಾಗ ಇಂತಹ ಪ್ರದೇಶಗಳಲ್ಲಿ ಈಗೀಗ ವ್ಯವಸಾಯಕ್ಕೆ ಸಂಬಂಧಿಸಿದ ಅನೇಕ ಹಬ್ಬಗಳು ಕಣ್ಮರೆಯಾಗುತ್ತಿವೆ. ಅಂದರೆ ಆಧ್ಯತೆ ಕಡಿಮೆಯಾಗಿದೆ. ಏಕೆಂದರೆ ಇಂದು ಯಾರನ್ನು ಕೇಳಿದರೂ ಕೂಡ ಇಂತಹ ಮಳೆಗಾಲದಲ್ಲಿ ಎಲ್ಲಿ ಬೇಸಾಯ, ಎಲ್ಲಿ ಬೆಳೆ, ಎಲ್ಲಿ ಪೂಜೆ ಎಂಬ ಮಾತು ಕೇಳಿಬರುತ್ತದೆ. ಕೃಷಿಗೆ ಸಂಬಂಧಿಸಿದ ಎಲ್ಲಾ ಆಚರಣೆಗಳು ಬದಲಾಗಿವೆ ಎಂದು ಹೇಳುವುದು ಸುಲಭವಲ್ಲ ಆದರೆ ಇಂದು ಮೇಲೆ ತಿಳಿಸಿರುವ ಹಬ್ಬಗಳ ಆಚರಣೆಗೆ ಆಧ್ಯತೆ ನೀಡುತ್ತಿರುವುದು ಗಮನಾರ್ಹವಾದ ವಿಷಯವಾಗಿದೆ.

ದಸರಾ ದಿನದಂದು ಬೇಡರು ಸಂಜೆ ಬನ್ನಿಸೊಪ್ಪು ತಂದು ತಮ್ಮ ಮನೆಯಲ್ಲಿರುವ ಆಯುಧಗಳನ್ನು ಪೂಜೆ ಮಾಡುತ್ತಾರೆ. ಪುರಾತನ ಕಾಲದ ಆಯುಧಗಳು ಕೆಲವು ಮನೆಗಳಲ್ಲಿ ಇದ್ದರೆ ಇಂದಿನ ದಿನಗಳಲ್ಲಿ ಬಳಸುವ ಕೆಲವು ಉಪಕರಣಗಳಾದ ಕುಡುಗೋಲು, ಕುರ್ಚಿಗೆ, ಕೊಡಲಿ, ಗಂಡುಗೊಡಲಿ, ಈಳಿಗೆ ಮತ್ತಿತರ

ವಸ್ತುಗಳಿಗೆ ಪೂಜೆ ಸಲ್ಲಿಸುತ್ತಾರೆ. ಇನ್ನೊಂದು ವಿಶೇಷತೆ ಎಂದರೆ ಮನೆಯಲ್ಲಿರುವ ಸೈಕಲ್, ಬೈಕ್, ಕಾರು ಇತ್ಯಾದಿಗಳನ್ನು ಪೂಜೆ ಮಾಡುತ್ತಾರೆ. ಅಂದರೆ ಇಲ್ಲಿ ನೋಡಬೇಕಾದ ಅಂಶವೆಂದರೆ ಈ ಹಿಂದೆ ಬೇಡರು ತಾವು ಬಳಸುತ್ತಿದ್ದ ಆಯುಧಗಳನ್ನು 'ಆಯುಧ ಪೂಜಾ' ಎಂದು ಮಾಡುತ್ತಿದ್ದರು. ಕಾಲ ಕಳೆದಂತೆ ಆಯುಧಗಳೇ ಇಲ್ಲದ ಇಂದಿನ ದಿನಗಳಲ್ಲಿ ಸೈಕಲ್, ಈಳಿಗೆ ಮನೆಯಲ್ಲಿನ ವಿದ್ಯುತ್ ಇವುಗಳೇ ಕೆಲವರಿಗೆ ಆಯುಧಗಳಾಗಿವೆ. ಹಬ್ಬದ ದಿನ ಸಾಮಾನ್ಯವಾಗಿ ಎಲ್ಲರ ಮನೆಯಲ್ಲಿ ಮಾಂಸದ ಊಟ, ಕೆಲವರು ತಮ್ಮ ಹಿರಿಯರಿಗೆ ಬಟ್ಟೆಗಳನ್ನು ಸಹ ಮಾಡಿಕೊಳ್ಳುತ್ತಾರೆ. ಕೆಲವು ಮನೆಗಳಲ್ಲಿ ಅಂದು ಮನೆಯಲ್ಲಿನ ವಿವಿಧ ಉಪಕರಣಗಳನ್ನು ಪೂಜೆಮಾಡಿ ಅದಕ್ಕೆ ಮಾಂಸದ ತುಂಡುಗಳನ್ನು ಕಡ್ಡಿಯಲ್ಲಿ ಚುಚ್ಚಿ ಎಡೆ ನೀಡುವ ಪದ್ಧತಿ ಕಾಣಬಹುದು. ಈ ಹಬ್ಬದ ದಿನದಂದು ಸಿಹಿ ಊಟ ಮಾಡುವುದು ಬೇಡರಲ್ಲಿ ವಿರಳ. ಆದರೆ ಇಂದು ಈ ಹಬ್ಬ ಎಲ್ಲಾ ಜನರು ಆಚರಿಸುವಂತದ್ದಾಗಿದೆ. ಊರಿನಲ್ಲಿ ಎಲ್ಲ ಜನರು ಪರಸ್ಪರ ಜಾತಿ ಬೇಧವಿಲ್ಲದೆ ಬನ್ನಿ ವಿನಿಮಯ ಮಾಡಿಕೊಳ್ಳುವುದರ ಮೂಲಕ 'ಬನ್ನಿ ತೆಗೆದುಕೊಂಡು ಬಂಗಾರದಂತೆ ಇರು' ಎಂದು ಹಾರೈಸುತ್ತಾರೆ. ಹಿರಿಯರಿಗೂ ಸಹ ಬನ್ನಿ ನೀಡಿ ಅವರಿಂದ ಆಶೀರ್ವಾದ ಪಡೆದುಕೊಳ್ಳುತ್ತಾರೆ. ಇನ್ನು ಕೂಲಿಕಾರರಾದ ಬಡಿಗ, ಬೇಲ್ದಾರ, ಟೈಲರ್‌ಗಳಂತಹ ವೃತ್ತಿ ಅನುಸರಿಸುತ್ತಿರುವ ಬೇಡರು ತಮ್ಮ ಬಳಕೆಗೆ ಬರುವ ಉಪಕರಣಗಳಿಗೆ ಆಯುಧ ಪೂಜೆ ಮಾಡುತ್ತಾರೆ.

**ಹಿರಿಯರ ಹಬ್ಬ**

ಬೇಡರಿಗೆ ಅತ್ಯಂತ ಮಹತ್ವವಾದ ಬಹಳ ಕಾಲದಿಂದಲೂ ಆಚರಿಸಿಕೊಂಡು ಬಂದಿರುವಂತಹ ಹಬ್ಬ. ಇಂದಿನ ದಿನಗಳಲ್ಲಿ ಈ ಹಬ್ಬಕ್ಕೆ ನೀಡುವ ಮಹತ್ವ ಹಾಗೂ ಇದರ ಕ್ರಮಗಳಲ್ಲಿ ಆಗಿರುವ ಬದಲಾವಣೆಗಳೇನು ಎಂಬುದನ್ನು ನೋಡುವುದಾದರೆ ಇಲ್ಲಿ ನೆಲೆಸಿರುವ ಪ್ರತಿಯೊಬ್ಬ ಬೇಡರು ಈ ಹಬ್ಬವನ್ನು ಚಾಚು ತಪ್ಪದೇ ಆಚರಿಸುತ್ತಾರೆ. ಕೆಲವು ಕಡೆ ಇದನ್ನು 'ಗುಗ್ಗರಿ ಹಬ್ಬ' ವೆಂತಲೂ, ಇನ್ನು ಕೆಲವೆಡೆ 'ರೊಟ್ಟಿಹಬ್ಬ' ಎಂದು ಸಂಬೋಧಿಸುತ್ತಾರೆ. ಬಹುಶ: ಬೇಡರಲ್ಲಿ ಅಲ್ಲದೆ ಇತರೆ ಸಮುದಾಯಗಳಲ್ಲಿ ಈ ಹಬ್ಬ ಆಚರಣೆಯಲ್ಲಿರುವದು ಕಂಡುಬರುತ್ತದೆ. ಈ ಹಬ್ಬಕ್ಕೆ ಬೇಡರಲ್ಲಿ ಬಹಳ ಮಹತ್ವವಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಈ ಹಬ್ಬವನ್ನು ಬಹಳ ವಿಶೇಷವಾಗಿ ಮಾಡುತ್ತಾರೆ. ತಮ್ಮ ವಂಶದಲ್ಲಿದ್ದ ಹಿರಿಯರನ್ನು ವರ್ಷಕ್ಕೊಮ್ಮೆ ನೆನಪಿಸಿಕೊಳ್ಳುವುದೇ ಇದರ ವಿಶೇಷತೆ. ಇದನ್ನು ಊರಿನ ಎಲ್ಲ ಬೇಡರು ಆಚರಿಸುತ್ತಾರೆ. ಮ್ಯಾಸಬೇಡರು ಹಾಗೂ ಊರುಬೇಡರಲ್ಲಿ ಈ ಹಬ್ಬಕ್ಕೆ ಸಂಬಂಧಿಸಿದಂತೆ ಯಾವ ವ್ಯತ್ಯಾಸಗಳು ಇಲ್ಲ.

ಹಬ್ಬದ ದಿನ ಬೇಡರು ಈ ಹಿಂದೆ ಉಪಸಂಸ್ಕೃತಿ ಅಧ್ಯಯನ ಮಾಲೆಯಲ್ಲಿ ತಿಳಿಸಿರುವಂತೆ "ಬೇಡರು ಹಿಂದಿನ ಕಾಲದಲ್ಲಿ ತಮ್ಮೊಡನೆ ಬಂದ ಆಯುಧಗಳು ಬಿಲ್ಲು, ಬಾಣ, ಭರ್ಜಿ, ಕಠಾರಿ, ಕತ್ತಿ ಎಲ್ಲವನ್ನು ಇಡುವರು"[೮] ಎಂದು ಉಲ್ಲೇಖಿಸಲಾಗಿದೆ. ಆದರೆ ಆಧುನಿಕ ಕಾಲದಲ್ಲಿ ಪಟ್ಟಣಗಳಲ್ಲಿ ಇಂತಹ ಆಯುಧಗಳು ಸಿಗುವುದು ವಿರಳ ಆದ್ದರಿಂದ ಇವುಗಳ ಬದಲಾಗಿ ಇಂದು ಹೆಚ್ಚಾಗಿ ಎಲ್ಲರೂ ತಾಮ್ರದ ತಂಬಿಗೆಯಲ್ಲಿ ನೀರನ್ನು ತುಂಬಿಟ್ಟು, ಅದನ್ನೇ ತಮ್ಮ ಹಿರಿಯರು ಎಂದು ಭಾವಿಸಿ ಅದಕ್ಕೆ ಬಟ್ಟೆ ತೊಡಿಸುವರು ಹಾಗೂ ಅಂದು ಮಾಡಿರುವ ಹುರುಳಿಕಾಳು ಗುಗ್ಗರಿಯನ್ನು ನೈವೇದ್ಯ ಮಾಡುತ್ತಾರೆ. ಆ ತಂಬಿಗೆ ಕೆಳಗೆ ಅಕ್ಕಿ ಅಥವಾ

ಜೋಳ ಹಾಕಿ ಇಟ್ಟಿರುತ್ತಾರೆ. ಕಮಲಾಪುರ, ಹೊಸಪೇಟೆ ಇಂತಹ ಊರುಗಳಲ್ಲಿ ಕೆಲವು ಬೇಡರು ಈ ಓಂದೆ ಈ ಹಬ್ಬದ ದಿನ ದೇವರಿಗೆ ಮಾಂಸದ ಅಡುಗೆ ನೈವೇದ್ಯ ಮಾಡುತ್ತಿದ್ದರು. ಆದರೆ ಇಂದು ಅದಕ್ಕೆ ಬೇರೆ ಮೆರಗು ನೀಡಿ ಬದನೆಕಾಯಿ ಪಲ್ಯ ಮಾಡಿ ಅದನ್ನೇ ಮಾಂಸದ ನೈವೇದ್ಯವೆಂದುಕೊಂಡು ಆ ತಂಬಿಗೆ ಮುಂದೆ ಇಡುತ್ತಾರೆ. ಏಕೆಂದರೆ ಎಷ್ಟೋ ಜನ ಬೇಡರು ಇಂದು ಸಂಪೂರ್ಣವಾಗಿ ಮಾಂಸ ತ್ಯಜಿಸಿ ಶುದ್ಧ ಸಸ್ಯಹಾರಿಗಳಾಗಿ ಪರಿವರ್ತನೆಗೊಂಡಿದ್ದಾರೆ. ಇನ್ನು ಕೆಲವರು ಹೊಸಬಟ್ಟೆ ತಂದು ಅದನ್ನು ಆ ತಂಬಿಗೆಗೆ ಸುತ್ತಿ ಮರುದಿನ ತೆಗೆದು ಮನೆಯಲ್ಲಿ ಯಾರಾದರೂ ಒಬ್ಬರು ಧರಿಸುತ್ತಾರೆ. ಇದುವರೆಗೂ ಕೆಲವು ಮನೆಗಳಲ್ಲಿ ಹೊಸಬಟ್ಟೆಗಳನ್ನು ನೇರವಾಗಿ ಧರಿಸದೇ ಕನಿಷ್ಟ ಪಕ್ಷ ಅವುಗಳನ್ನು ಹಸುಗಳ ಮೈಮೇಲೆ ಹಾಕಿ ಧರಿಸುವ ಪದ್ಧತಿ ಇಂದಿಗೂ ಈ ಊರಿನಲ್ಲಿ ಇದೆ. ಚಿಕ್ಕಮಕ್ಕಳಿಗೆ ತಂದ ಹೊಸ ಬಟ್ಟೆಗಳನ್ನು ಈ ರೀತಿ ಮಾಡುವುದು ಹೆಚ್ಚು. ಬೇಡರ ಇಂದು ವಿವಿಧ ರೀತಿಯ ಹಬ್ಬಗಳನ್ನು ಆಧುನಿಕ ರೀತಿಯಲ್ಲಿ ಆಚರಿಸುತ್ತಾರೆ. ಹಾಗೂ ಈ ಹಿಂದೆ ಆಚರಿಸುತ್ತಿದ್ದ ರೀತಿಗೂ ಇಂದು ಆಚರಿಸುವ ರೀತಿಗೂ ಅಜಗಜಾಂತರ ವ್ಯತ್ಯಾಸ ಹಾಗೂ ಬದಲಾವಣೆಗಳಾಗಿರುವುದನ್ನು ಕಾಣುತ್ತೇವೆ.

### ದೀಪಾವಳಿ

ಇಂದು ಈ ಹಬ್ಬವನ್ನು ಬೇಡರಲ್ಲಿ ಕೆಲವು ಜನ ಇಲ್ಲಿ ವಿಶೇಷವಾಗಿ ಆಚರಿಸುತ್ತಾರೆ. ಇನ್ನು ಕೆಲವರು ಇದನ್ನು ಆಚರಿಸುವುದಿಲ್ಲ. ದೀಪಾವಳಿ ದಿನದಂದು ಲಕ್ಷ್ಮಿಪೂಜೆಯನ್ನು ಮಾಡಲಾಗುತ್ತದೆ. ಇಲ್ಲಿ ಲಕ್ಷ್ಮಿ ಎಂದರೆ ಹಣ, ಬಂಗಾರವೆಂದು ನಂಬಲಾಗಿದೆ. ಅಮವಾಸ್ಯೆ ದಿನದಂದು ಸಾಯಂಕಾಲ ಮನೆಯಲ್ಲಿ ಅಲಂಕಾರ ಮಾಡಿ ಒಂದು ತಂಬಿಗೆ ಮೇಲೆ ತೆಂಗಿನಕಾಯಿಯನ್ನು ಇಟ್ಟು ಅದಕ್ಕೆ ಶೃಂಗಾರಮಾಡಿ ಹೆಚ್ಚು ವಡವೆಗಳಿದ್ದವರು ಆ ತೆಂಗಿನಕಾಯಿಗೆ ತಾಳಿ, ಮೂಗುತಿ, ಓಲೆ ಇವೆಲ್ಲವುಗಳನ್ನು ಹಾಕಿ ಊರಿನಲ್ಲಿರುವ ಸ್ವಾಮಿಗಳನ್ನು ಕರೆಸಿ ಅವರಿಂದ ಪೂಜೆ ಮಾಡಿಸುತ್ತಾರೆ. ಜೊತೆಗೆ ಹಣವನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ. ಮನೆಯಲ್ಲಿ ಹಣತೆಗಳನ್ನು ಹಚ್ಚಿ ದೀಪಗಳಿಂದ ಅಲಂಕಾರ ಮಾಡಿರುತ್ತಾರೆ. ಮನೆಗಳ ಮುಂದೆ ಆಕಾಶ ಬುಟ್ಟಿಗಳನ್ನು ಕಟ್ಟಿ ಪಟಾಕಿಗಳನ್ನು ಸಿಡಿಸಿ ಸಂತೊಷವನ್ನು ವ್ಯಕ್ತಪಡಿಸುತ್ತಾರೆ. ತೀರ ಹಿಂದುಳಿದ ಕುಟುಂಬದವರು ಈ ಹಬ್ಬದ ಆಚರಣೆಯ ಗೋಜಿಗೆ ಹೋಗುವುದಿಲ್ಲ ಏಕೆಂದರೆ 'ದೀಪಾವಳಿ ಇದ್ದಂತಹವರ ಹಬ್ಬ' ಎಂಬ ಮನೋಭಾವ ಇವರಲ್ಲಿದೆ.

### ಮೊಹರಂ

ಮೊಹರಂ ಹಬ್ಬವು ಪ್ರತಿವರ್ಷವೂ ಫೆಬ್ರವರಿ ಮಾರ್ಚ್ ತಿಂಗಳಿನಲ್ಲಿ ಬರುವ ಹಬ್ಬವಾಗಿದೆ. ಈಗಿನ ಇರಾಕ್ ನಲ್ಲಿರುವ ಕರ್ಬಾಲದಲ್ಲಿರುವ ಈ ಆಚರಣೆ ಇಂದು ಪ್ರತಿ ಹಳ್ಳಿ ಹಳ್ಳಿಗೂ ಪ್ರವೇಶ ಮಾಡಿದೆ. ಮುಸ್ಲಿಂರ ಹತ್ಯಾಕಾಂಡದ ಸಂಕೇತವಾಗಿ ಆಚರಿಸುವ ಈ ಹಬ್ಬ ಇಂದು ಬುಡಕಟ್ಟು ಜೀವನದಲ್ಲೂ ಪ್ರವೇಶಿಸಿದೆ. ಮೊಹರಂ ಹಬ್ಬದ ದಿನ ಬೇಡರಲ್ಲಿ ಹರ್ಷದ ವಾತಾವರಣವಿರುತ್ತದೆ. ಈ ಹಬ್ಬವನ್ನು ಹಿಂದೂ - ಮುಸ್ಲಿಂ ಒಂದಾಗಿ ಸಹೋದರ ಭಾವನೆಯಿಂದ ಆಚರಿಸುವಂತದ್ದಾಗಿದೆ. ಅಂದಿನ ದಿನ ಬೇಡರು ರಾತ್ರಿಯಿಡೀ ಪೀರಲ ದೇವರ ಮುಂದೆ ಬೆಂಕಿ ಹಾಕಿ ಗುಡಿಯಲ್ಲಿ ಕೂಡಿಸಿರುವ ದೇವರುಗಳಿಗೆ ಪೂಜೆ ಸಲ್ಲಿಸುತ್ತಾರೆ. ಇಲ್ಲಿ ಮುಸ್ಲಿಂ ಹಿಂದೂ ಎಂಬ ಭಾವನೆಯೇ ಬರುವುದಿಲ್ಲ. ಅವರವರ ಪೂಜಾ ವಿಧಾನಗಳನ್ನು ಅನುಸರಿಸುತ್ತಾರೆ. ದೇವರ

ಮುಂದೆ ಹಾಕಿರುವ ಬೆಂಕಿ ಹೊಂಡದಲ್ಲಿ ಎಲ್ಲರು ಕಡ್ಡಾಯವಾಗಿ ಉಪ್ಪನ್ನು ಎಸೆಯುತ್ತಾರೆ. ಮರುದಿನ ಬೇಡರು, ಮುಸ್ಲಿಂ ಇತ್ಯಾದಿ ಜನರು ಮೈಗೆ ಹುಲಿ ಬಣ್ಣವನ್ನು ಹಚ್ಚಿಕೊಂಡು ಹಲಗೆಗಳನ್ನು ಬಾರಿಸುತ್ತಾ ಕುಣಿಯುತ್ತಾರೆ. ಕೆಲವರು ಕರಡಿವೇಷ ಇತರೆ ರೀತಿಯ ವೇಷ ಧರಿಸುತ್ತಾರೆ. ಸುಮಾರು ೧೦ ವರ್ಷಗಳ ಹಿಂದೆ ಈ ಹಬ್ಬದಲ್ಲಿ 'ಮೋಡಿ' ಆಟ ಪ್ರದರ್ಶಿಸಲಾಗುತ್ತಿತ್ತು. ಈಗ ಅದು ಕನಸಾಗಿದೆ. ನಂತರ ಕಡೇ ದಿನ ಸಾಯಂಕಾಲ 'ದೇವರು ನೀರಿನಲ್ಲಿ ಬೀಳುವ' ಕಾರ್ಯಕ್ರಮಕ್ಕೆ ಎಲ್ಲ ಜಾತಿ ಜನಾಂಗದ ಜನರು ಸೇರಿ ಮೆರವಣಿಗೆ ಮೂಲಕ ಕುಡಿದು, ಕುಣಿದು, ಕುಪ್ಪಳಿಸಿ ಹಬ್ಬಕ್ಕೆ ವಿದಾಯ ಹೇಳುತ್ತಾರೆ. ಇದರಿಂದ ಇಂದು ಬೇಡರು ಇತರೆ ಸಮುದಾಯಗಳೊಂದಿಗೆ ಹೇಗೆ ಬೆರೆಯುತ್ತಾರೆ ಎಂಬುದು ವೇದ್ಯವಾಗುತ್ತದೆ.

### ಗೌರಿಹಬ್ಬ

ಪ್ರಸ್ತುತ ದಿನಗಳಲ್ಲಿ ಬೇಡರು ಗೌರಿ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬದಲ್ಲಿ ಮತ್ತೆ ಎರಡು ರೀತಿಯಲ್ಲಿದೆ ಒಂದು ದೊಡ್ಡಗೌರಿ ಹುಣ್ಣಿಮೆ, ಮತ್ತೊಂದು ಸಣ್ಣಗೌರಿ ಹುಣ್ಣಿಮೆ ಎಂದು. ಇಲ್ಲಿ ಹೆಚ್ಚಾಗಿ ದೊಡ್ಡಗೌರಿ ಹುಣ್ಣಿಮೆಗೆ ವಿಶೇಷ ಒತ್ತು ನೀಡುತ್ತಾರೆ. ಈ ಹಬ್ಬದ ದಿನದಂದು ಎಲ್ಲರು ಸಿಹಿ ಅಡುಗೆ ಮಾಡಿ ಗೌರಿಗೆ ಅಂದು 'ಸಕ್ಕರೆ ಆರತಿ' ಮಾಡಿಕೊಂಡು ಬರುತ್ತಾರೆ. ಈ ಹಿಂದೆ ಹಬ್ಬವನ್ನು ಕೆಲವು ಓಣಿಗಳಲ್ಲಿ ಎರಡು ಮೂರಿ ದಿನಗಳ ಕಾಲ ಆಚರಿಸುತ್ತಿದ್ದರು. ದಿನಾಲು ಓಣಿಯ ಹುಡಿಗಿಯರು ಸೇರಿ ತಟ್ಟೆಗಳಲ್ಲಿ ಒಂದು ದಿನ ಒಂದು ರೀತಿ ಹೂವುಗಳನ್ನು ಇಟ್ಟುಕೊಂಡು ಆರತಿ ಮಾಡಿಕೊಂಡು ಬರುತ್ತಿದ್ದರು. ಕ್ರಮೇಣ ಈ ವ್ಯವಸ್ಥೆ ಮಾಯವಾಗಿ ಕೇವಲ ಒಂದೇ ದಿನ ಊರಿನಲ್ಲಿ ಇತರೆ ಸಮುದಾಯದವರು ತಯಾರಿಸದ ಸಕ್ಕರೆ ಗೊಂಬೆಗಳನ್ನು ತಟ್ಟೆಯಲ್ಲಿಟ್ಟುಕೊಂಡು ಗೌರಿಗೆ ಪೂಜೆ ಸಲ್ಲಿಸಿಕೊಂಡು ಬರುವುದು ಈಗಿನ ಸಂಪ್ರದಾಯ ವಾಗಿದೆ. ಚಿಕ್ಕ ಚಿಕ್ಕ ಹೆಣ್ಣುಮಕ್ಕಳು ಸೀರೆ ಧರಿಸಿ ಕೋಲು ಆಟವಾಡುವ ರಿವಾಜು ಇಂದಿಗೂ ನಾವು ಹಳ್ಳಿಗಳಲ್ಲಿ ಕಾಣುತ್ತೇವೆ.

### ಗಣೇಶ ಚತುರ್ಥಿ

ಆದಿವಾಸಿ ಕಾಲದಲ್ಲಿ ಗಣೇಶ ಬುಡಕಟ್ಟುಗಳ ಆರಾದ್ಯ ದೈವವಾಗಿದ್ದನು. ನಂತರದಲ್ಲಿ ಗಣೇಶ ಮೇಲುವರ್ಗದ ಜನರ ವಶಕ್ಕೆ ಹೋದನು ಅಂದಿನ ದಿನದಿಂದ ಬಡುಕಟ್ಟುಗಳ ಜನರು ಇವನ ಪೂಜೆ ಮರೆತ್ತಿದ್ದರು. ಆದರೆ ಕಾಲದ ಚಕ್ರ ತಿರುಗಿದಂತೆ ಗಣೇಶನ ಪ್ರಭಾವ ಇಂದು ಪ್ರತಿ ಹಳ್ಳಿಗೂ ಬಂದಿದೆ. ಈ ಹಿಂದೆ ಗಣೇಶನ ಹಬ್ಬವನ್ನು ನಾವು ಕೇವಲ ಮೇಲ್ವರ್ಗದ ಜಾತಿ ಜನಾಂಗಗಳಲ್ಲಿ ಆಚರಿಸುತ್ತಿದ್ದದ್ದು ಕಂಡುಬರುತ್ತದೆ. ಆದರೆ ಇಂದು ಎಲ್ಲ ಜಾತಿ ಜನಾಂಗಗಳ ಆರಾಧ್ಯ ದೈವವಾಗಿದ್ದಾನೆ. ಅದರಂತೆ ಇಲ್ಲಿನ ಬೇಡರು ಗಣೇಶನ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬದಂದು ಓಣಿ ಓಣಿಯಗಳಲ್ಲಿ ಗಲ್ಲಿ ಗಲ್ಲಿಗಳಲ್ಲಿ ಒಂದು ಗಣೇಶನ ವಿಗ್ರಹ ಇರುವುದನ್ನು ಕಾಣುತ್ತೇವೆ. ಬೇಡರು ವಾಸಿಸುವ ಹಲವು ಓಣಿಗಳಲ್ಲಿ ಕೂಡ ಗಣೇಶ ವಿಗ್ರಹ ಕೂಡಿಸಿ ಅಲಂಕಾರ ಮಾಡಿರುವುದನ್ನು ನಾವು ಕಾಣುತ್ತೇವೆ. ಇದಕ್ಕೆ ಕೆಲವು ಓಣಿಯಲ್ಲಿನ ಜನರಿಂದ ಹಣವನ್ನು ಸಹ ಸಂಗ್ರಹಿಸುತ್ತಾರೆ. ಕೆಲವು ಮನೆಗಳಲ್ಲಿಯೂ ಸಹ ಇಂದು ಗಣೇಶನ ಪೂಜೆ ಮಾಡುವುದು ಸಾಮಾನ್ಯವಾಗಿ ಕಂಡುಬರುವ ಅಂಶವಾಗಿದೆ.

ಇವುಗಳನ್ನು ಹೊರುತಪಡಿಸಿ ಇಲ್ಲಿನ ಬೇಡರು ಬೇರೆ ಬೇರೆ ರೀತಿಯ ಹಬ್ಬಗಳನ್ನು ಆಚರಿಸುತ್ತಾರೆ. ಅವುಗಳೆಂದರೆ ಜನವರಿ ೧ (ಹೊಸ ವರ್ಷ), ಬಸವನ ಜಯಂತಿ, ಸಂಕ್ರಾಂತಿ, ರಾಖೀಹಬ್ಬ, ಹೋಳಿ ಇತ್ಯಾದಿಗಳಾಗಿವೆ. ಇವು ಕೇವಲ ಈ ಪ್ರದೇಶದಲ್ಲಿ ಅಲ್ಲದೇ ವಿವಿದೆಡೆಗಳಲ್ಲಿ ಆಚರಿಸುವ ಹಬ್ಬಗಳಾಗಿವೆ.

**ಜಾತ್ರೆ ಹಾಗು ಉತ್ಸವಗಳು**

ಹಬ್ಬ ಹಾಗೂ ಜಾತ್ರೆಗಳಲ್ಲಿ ದೇವತೆಗಳ ಪ್ರಭಾವ ಹೆಚ್ಚಾಗಿರುತ್ತದೆ. ಇದರಲ್ಲಿ ಗಂಡು ಹಾಗೂ ಹೆಣ್ಣು ದೇವತೆಗಳ ಪಾತ್ರ ಸಮನಾಗಿದೆ. ಈ ಹಿಂದೆ ದ್ರಾವಿಡರಲ್ಲಿ ಗಂಡು ದೇವತೆಗಳಿಗಿಂತ ಹೆಣ್ಣು ದೇವತೆಗಳಿಗೆ ಹೆಚ್ಚಿನ ಆಧ್ಯತೆ ನೀಡಲಾಗಿತ್ತು. ನಂತರ ವೈದಿಕ ಸಂಸ್ಕೃತಿಯ ಪರಿಣಾಮದಿಂದಾಗಿ ಈ ಎಲ್ಲಾ ಹೆಣ್ಣುದೇವತೆಗಳು ಗಂಡು ದೇವತೆಗಳ ಹೆಂಡತಿಯರಾದರು. ಇದಕ್ಕೆ ಪ್ರಾಚೀನ ಕಾಲದಲ್ಲಿದ್ದ ಮಾತೃಪ್ರಧಾನ ವ್ಯವಸ್ಥೆ ಪಿತೃಪ್ರಧಾನ ವ್ಯವಸ್ಥೆಗೆ ಪರಿವರ್ತನೆಗೊಂಡಿದ್ದು ಉತ್ತಮ ನಿದರ್ಶನವಾಗಿದೆ. ಇಂತಹ ವ್ಯವಸ್ಥೆ ಮಧ್ಯದಲ್ಲಿಯೂ ಬುಡಕಟ್ಟು ಹಾಗೂ ದಲಿತರಲ್ಲಿ ಹೆಣ್ಣು ದೇವತೆಗಳಿಗೆ ಇಂದಿಗೂ ಭಕ್ತಿ ಭಾವನೆ ಸಾಕಷ್ಟಿದೆ. ಅದರಂತೆ ಸಮಾಜದಲ್ಲಿ ಸ್ತ್ರೀಗೆ ಗೌರವ ಭಾವನೆ ಹೊಂದಿರುವುದೂ ಒಂದು ಸಂಗತಿಯಾಗಿದೆ.

ಕೂಡ್ಲಿಗಿಯಲ್ಲಿ ಅನೇಕ ವರ್ಷಗಳಿಂದಲೂ ಕಟ್ಟುನಿಟ್ಟಾಗಿ ವಿಜೃಂಭಣೆಯಿಂದ ನಡೆಸಿಕೊಂಡು ಬಂದಿರುವ ಜಾತ್ರೆಗಳೆಂದರೆ ಊರಮ್ಮನ ಜಾತ್ರೆ, ಗುಳೇವು ಲಕ್ಕಮ್ಮ ಹಾಗೂ ನಂತರದಲ್ಲಿ ಆಂಜನೇಯಸ್ವಾಮಿ ಜಾತ್ರೆ ಉಳಿದಂತೆ ಹಲವಾರು ಜಾತ್ರೆಗಳು ಈ ಊರಿನ ಅಕ್ಕಪಕ್ಕದಲ್ಲಿ ಜರುಗುತ್ತವೆ.

**ಊರಮ್ಮನ ಜಾತ್ರೆ**

ಸಾಮಾನ್ಯವಾಗಿ ಪ್ರತಿಯೊಂದು ಹಳ್ಳಿ, ಪಟ್ಟಣಗಳಲ್ಲಿ ಊರಮ್ಮ ದೇವತೆ ನೆಲೆಸಿರುತ್ತಾಳೆ. ಇದು ಆದಿಮ ಸಮಾಜದಿಂದಲೂ ಅಸ್ತಿತ್ವದಲ್ಲಿರುವ ದೇವತೆ. "ದಕ್ಷಿಣ ಭಾರತದ ದೇವಿಯರು ಆರ್ಯಪೂರ್ವ ಭಾರತದಲ್ಲಿ ದ್ರಾವಿಡರಿಂದ ಪ್ರಾರಂಭವಾಗಿದ್ದವೆಂದು"[೯] ಎಸ್.ಎಸ್.ಹಿರೇಮಠರವರು ಉಲ್ಲೇಖಿಸಿದ್ದಾರೆ. ಇದರಿಂದ ಪ್ರಾಚೀನ ಕಾಲದಿಂದಲೂ ದೇವಿಯರ ಆರಾಧನೆ ಇತ್ತೆಂದು ತಿಳಿದುಬರುತ್ತದೆ. ಇದರಂತೆ ಕೂಡ್ಲಿಗಿಯಲ್ಲಿ ಊರಮ್ಮನ ದೇವಸ್ಥಾನವಿದೆ ಇದಕ್ಕೆ ಸಂಬಂಧಿಸಿದ ಒಂದು ಬಾವಿಯೂ ಇದೆ. ಇದರಲ್ಲಿ ಸದಾಕಾಲ ನೀರಿರುವುದು ಇದರ ವಿಶೇಷತೆ. ಈ ಜಾತ್ರೆಯನ್ನು ಈ ಹಿಂದೆ ವರ್ಷಕ್ಕೊಮ್ಮೆ ತುಂಬಾ ಸರಳವಾಗಿ ಆಚರಿಸುತ್ತಿದ್ದರು. ಕ್ರಮೇಣ ಕಾಲ ಕಳೆದಂತೆ ಇದನ್ನು ಎರಡು ವರ್ಷಗಳಿಗೊಮ್ಮೆ ಆಚರಿಸುವ ಪದ್ಧತಿ ಬಂದಿತು. ಆದರೆ ಇಂದು ಹತ್ತು ವರ್ಷಗಳಿಗೊಮ್ಮೆ ಜಾತ್ರೆಯನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ. ಈಗ್ಗೆ ಸುಮಾರು ಹತ್ತು ತಿಂಗಳ ಹಿಂದೆಯಷ್ಟೇ ಇಲ್ಲಿ ಈ ಜಾತ್ರೆಯನ್ನು ಆಚರಿಸಲಾಗಿತ್ತು. ಇದನ್ನು ಮತ್ತೆ ನಾವು ನೋಡಬೇಕಾದರೆ ಇನ್ನು ಹತ್ತು ವರ್ಷಗಳ ಕಾಲ ಕಾಯಬೇಕು. ಇದು ಮೂರು ನಾಲ್ಕು ದಿನಗಳವರೆಗೆ ತುಂಬಾ ಅದ್ದೂರಿಯಿಂದ ಜರುಗುತ್ತದೆ. ಮೊದಲಿಗೆ ಅಮ್ಮನನ್ನು ಗಂಗೆ ಅಥವಾ ಜಲ್ದಿಗೆ ಹೊರಡಿಸಿ ನಂತರ ಗುಡಿತುಂಬಿಕೊಳ್ಳುತ್ತಾಳೆ. ನಂತರ ಊರಮ್ಮದೇವಿಗೆ ಒಂದು ಕೋಣವನ್ನು ಬಲಿ ಕೊಡಲು ಕೋಣವನ್ನು ಬಿಟ್ಟಿರುತ್ತಾರೆ. ನಂತರ ಒಂದು ದಿನ ಊರಿನಲ್ಲಿರುವ ಬೇಡರು ಬ್ಯಾಟಿ ಕಡಿಯುತ್ತಾರೆ. ಕೋಣವನ್ನು ಬಲಿಕೊಡುವ ದಿನದಂದು ಊರಿನ ತುಂಬಾ 'ಚರಗ ಚೆಲ್ಲವು ಪದ್ಧತಿ ಇರುತ್ತದೆ.' ಇದರಲ್ಲಿ ಬೇಡರ ಪಾತ್ರ

ಹಿರಿದಾದುದಾಗಿದೆ. 'ಹುಲುಸು' ಎಂಬುವುದನ್ನು ಗುಡಿ ಪಕ್ಕದಲ್ಲಿಯೇ ಪೂಜೆಗೆ ಇಟ್ಟಿರುತ್ತಾರೆ. ಇದರ ಸಂಪೂರ್ಣ ರಕ್ಷಣೆ ಕಾರ್ಯ ಬೇಡರದಾಗಿರುತ್ತದೆ. ಅದನ್ನು ಒಯ್ಯುವಾಗ ಹಿಂದೆ ಬೇಡರು ತಮ್ಮ ಆಯುಧಗಳನ್ನು ಹಿಡಿದು ರಕ್ಷಣೆ ನೀಡುತ್ತಿದ್ದರು. ಅದು ಇಂದು ಬದಲಾವಣೆಗೊಂಡು ಇವರ ಕೈಯಲ್ಲಿ ಬಡಿಗೆ, ಕೋಲುಗಳು ಬಂದಿವೆ. ಅಂದರೆ ಅದಕ್ಕೆ ಪರ್ಯಾಯ ವ್ಯವಸ್ಥೆ ಇದಾಗಿದೆ. ಅಂದು ರಾತ್ರಿ ೩ ಗಂಟೆ ಸುಮಾರಿಗೆ ಕೋಣವನ್ನು ಬಲಿಕೊಟ್ಟು ದೇವಸ್ಥಾನದ ಮುಂದೆ ಅವರ ತಲೆಯ ಮೇಲೆ ಅದರ ಕೊಬ್ಬಿನಿಂದ ದೀಪ ಹಚ್ಚುತ್ತಾರೆ. ಅದನ್ನು ಕಾಯುತ್ತಾ ಒಬ್ಬರಿರುತ್ತಾರೆ. ೨೦೦೨ ಏಪ್ರಿಲ್ ತಿಂಗಳಿನಲ್ಲಿ ನಡೆದ ಈ ಜಾತ್ರೆಗೆ ಸುಮಾರು ೫೦೦೦ ಕುರಿ ಮೇಕೆಗಳ ಬಲಿ ನೀಡುವುದರೊಂದಿಗೆ ತುಂಬಾ ವೆಚ್ಚದಾಯಕವಾಗಿ ಆಚರಿಸಿದರು. ಇದರಲ್ಲಿ ಊರಿನಲ್ಲಿರುವ ಎಲ್ಲ ಜಾತಿ ಜನಾಂಗದವರು ಭಾಗವಹಿಸಿ ತಮ್ಮದೇ ಆದ ವಿಶೇಷ ಪಾತ್ರವನ್ನು ವಹಿಸಿದ್ದರು.

**೨. ಗುಳೇವು ಲಕ್ಕಮ್ಮ**

ಕೂಡ್ಲಿಗಿಯಲ್ಲಿ ಗುಳೇವು ಲಕ್ಕಮ್ಮ ಒಂದು ವಿಶೇಷವಾದ ಜಾತ್ರೆ. ಈ ದೇವತೆ ಕೂಡ್ಲಿಗಿ ಪಕ್ಕದ 'ಗೋವಿಂದನಗಿರಿ' ಎಂಬ ಹಳ್ಳಿಯಲ್ಲಿದೆ. ಸುಮಾರು ೧೦ ವರ್ಷಗಳ ಹಿಂದೆ ಈ ಊರಲ್ಲಿ ಈ ಜಾತ್ರೆಯನ್ನು ವರ್ಷಕ್ಕೊಮ್ಮೆ ಆಚರಿಸುತ್ತಿದ್ದರು. ಈ ಹಬ್ಬದ ವಿಶೇಷವೇನೆಂದರೆ ಊರಿನ ಎಲ್ಲಾ ಜನರು ಒಂದು ದಿನದ ಮಟ್ಟಿಗೆ ಊರನ್ನು ಬಿಟ್ಟು ಕಾಡಿನಲ್ಲಿ ಇರುವುದು, ಆಗ ಊರು ತುಂಬಾ ಚಿಕ್ಕದಾಗಿತ್ತು ಊರಿನ ಸಮಸ್ತ ಜನರು ಒಂದು ದಿನದ ಮಟ್ಟಿಗೆ ಗುಳೇವು ಕೀಳುತ್ತಿದ್ದರು. ಅಲ್ಲಿಯೇ ಕೆಲವರು ಸಿಹಿ ಅಡುಗೆ ಮಾಡಿದರೆ ಕೆಲವರು ಮಾಂಸದ ಅಡುಗೆ ಮಾಡಿಕೊಂಡು ಊಟಮಾಡಿ ಬರುತ್ತಾರೆ. ಈ ಪದ್ಧತಿ ಹಿಂದೆ ಬಹಳ ಸುಲಭವಾಗಿತ್ತು. ಇದರಲ್ಲಿ ಮುಸ್ಲಿಂ ಜನಾಂಗದವರೂ ಭಾಗವಹಿಸುತ್ತಿದ್ದರು. ಸಾಯಂಕಾಲ ದೇವರು ತನ್ನ ಮೂಲ ಸ್ಥಳದಿಂದ ಬಂದು ಊರಮ್ಮನ ದೇವಸ್ಥಾನದ ಎದುರು ಕೂಡಿಸಿ ಪೂಜೆ ಸಲ್ಲಿಸುತ್ತಾರೆ. ಲಕ್ಕಮ್ಮ ಹಾಗೂ ಊರಮ್ಮ ಸಹೋದರಿಯರೆಂದು ಕತೆ ಹೇಳುತ್ತಾರೆ. ಇದಕ್ಕೂ ಮುಂಚೆ ಬೆಳಿಗ್ಗೆ ಊರಿನ ಜನರನ್ನು ಹೊರಡಿಸಲು ದೇವತೆ ಪೂಜಾರಿ ದೇವರನ್ನು ಹೊತ್ತುಕೊಂಡು ಊರೆಲ್ಲ ತಿರುಗಾಡುತ್ತಾನೆ. ಸಾಯಂಕಾಲ ಮತ್ತೆ ಊರೊಳಗೆ ಕರೆದುಕೊಂಡು ಬರುತ್ತಾನೆ. ಮನೆಗೆ ಬಂದಮೇಲೆ ಊರಮ್ಮನ ದೇವಸ್ಥಾನದ ಮುಂದೆ ಹಾಕಲಾಗಿರುವ ಬೆಂಕಿಯನ್ನು ತಂದು ಬಾಗಿಲಲ್ಲಿ ಇಟ್ಟು ಪೂಜೆಮಾಡಿ ತೆಂಗು ಒಡೆದು ಒಳಗೆ ಹೋಗುತ್ತಾರೆ. ತೆಂಗಿನಕಾಯಿಯನ್ನು ನಂತರ ಊರಿನ ಅಗಸರು ಬಂದು ತೆಗೆದುಕೊಂಡು ಹೋಗುತ್ತಾರೆ.

ಒಂದುಕಾಲದಲ್ಲಿ ಈ ಜಾತ್ರೆ ದಿನ ಊರಿನಲ್ಲಿ ಒಬ್ಬ ವ್ಯಕ್ತಿ ಕೂಡ ಕಾಣಿಸುತ್ತಿರಲಿಲ್ಲ. ಆದರೆ ಊರು ಬೆಳೆದಂತೆ ಕೆಲವು ಜನರು ಬರಲು ಒಪ್ಪದೇ ಈ ಜಾತ್ರೆಯನ್ನು ಈಗ ೫-೬ ವರ್ಷಗಳಿಗೊಮ್ಮೆ ಮಾಡುವಂತಾಗಿದೆ. ಊರು ಬೆಳೆದಿರುವುದರಿಂದ ಮನೆಬಿಟ್ಟು ಬರಲು ಕೆಲವರು ಒಪ್ಪುತ್ತಿಲ್ಲ. ಇದರಿಂದಾಗಿ ಈ ಜಾತ್ರೆಯನ್ನು ಈಗ ಹೆಚ್ಚಾಗಿ ಮಾಡುವುದಿಲ್ಲ. ಜಾತ್ರೆ ಒಂದು ದಿನದ ಪಿಕ್‌ನಿಕ್ ರೀತಿಯಲ್ಲಿರುತ್ತದೆ. ಜಾತ್ರೆಯಲ್ಲಿ ಕೋಲಾಟ ಇತರೆ ಮನೋರಂಜನೆ ಆಟಗಳಿರುತ್ತವೆ. ಊರಿನ ಪಕ್ಕದ ತೋಟದಲ್ಲಿ ಒಂದು ಮರಕ್ಕೆ ಒಂದು ಕುಟುಂಬದಂತೆ ಆ ಮರಕ್ಕೆ ಜಮಖಾನೆ, ತಾಡುಪಾಲುಗಳಿಂದ ಅಡ್ಡಕಟ್ಟಿಕೊಂಡು ಬೆಳಿಗ್ಗೆ ೬ ಗಂಟೆಯಿಂದ ಸಾಯಂಕಾಲ ೬

ಗಂಟೆಯವರೆಗೆ ಕಳೆಯುತ್ತಾರೆ. ಕೆಲವರು ಎತ್ತಿನ ಬಂಡಿಗಳನ್ನು ಹೂಡಿಕೊಂಡು ಬರುತ್ತಾರೆ. ಇನ್ನು ಕೆಲವೆಡೆ ಒಂದೇ ದೊಡ್ಡ ಮರದಲ್ಲಿ ಎರಡರಿಂದ ಮೂರು ಕುಟುಂಬಗಳು ಇರುತ್ತವೆ. ಇದರಿಂದ ಒಂದು ದಿನದ ಮಟ್ಟಿಗೆ ಬೇರೆ ಬೇರೆ ಆಗಿರುವ ಕುಟುಂಬಗಳು ಆ ದಿನ ಒಟ್ಟಾಗಿ ಒಂದೇ ಕಡೆ ನೆಲೆಸುತ್ತಾರೆ. ಆದರೆ ಇಂದು ಆ ಜಾತ್ರೆ ಮಾಡಬೇಕೆಂದರೆ ೨-೩ ವರ್ಷಗಳನ್ನು ಕಾಯಬೇಕಾಗುತ್ತದೆ. ಇಂದು ಈ ಊರಿನಲ್ಲಿ ಈ ಎರಡು ಜಾತ್ರೆ ಬಿಟ್ಟರೆ ಬೇರೆ ಯಾವ ಜಾತ್ರೆಗಳು ನಡೆಯುವುದಿಲ್ಲ. ಒಂದು ಅಂಶವೆಂದರೆ ಕೂಡ್ಲಿಗಿ ಸುತ್ತ ಇರುವ ಪ್ರದೇಶಗಳಲ್ಲಿ ಕೆಲವು ಜಾತ್ರೆಗಳು ನಡೆಯುತ್ತವೆ. ಅವುಗಳನ್ನು ಇಲ್ಲಿನ ಬೇಡ ಸಮುದಾಯ ಆಚರಿಸುತ್ತಾರೆ. ಅವುಗಳೆಂದರೆ ಕೂಡ್ಲಿಗಿ ವ್ಯಾಪ್ತಿಗೆ ಬರುವ ಮೊರಬದ ವೀರಭದ್ರೇಶ್ವರ ಜಾತ್ರೆ ಇದು ಸಾಮಾನ್ಯವಾಗಿ ಈ ಹಳ್ಳಿಯಲ್ಲಿ ಜರುಗುತ್ತಿದ್ದರೂ ಕೂಡ್ಲಿಗಿ ಬೇಡರಿಗೆ ಇದು ಇವರ ಊರಿನಲ್ಲಿ ನಡೆಯುವ ಜಾತ್ರೆಗಿಂತ ಸಂಭ್ರಮದಿಂದ ಆಚರಿಸುತ್ತಾರೆ. ಅಂದು ಎಲ್ಲರೂ ಮೊರಬಕ್ಕೆ ಹೋಗಿ ಬರುತ್ತಾರೆ.

ಇನ್ನು ಕೂಡ್ಲಿಗಿಯಿಂದ ಸಂಡೂರಿಗೆ ಹೋಗುವ ದಾರಿಯಲ್ಲಿ ಬರುವ 'ಕೆರೆನಹಳ್ಳಿ' ಎಂಬಲ್ಲಿ ದುರುಗಮ್ಮ ದೇವಸ್ಥಾನವಿದೆ. ಅದು ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಈ ಜಾತ್ರೆಯನ್ನು ಕೂಡ್ಲಿಗಿ ಬೇಡರು ಎರಡು ದಿನಗಳ ಕಾಲ ಮಾಡುತ್ತಾರೆ. ಸಾಧ್ಯವಾದರೆ ಕೆಲವರು ಬ್ಯಾಟಿಯನ್ನು ಕಡಿಯುತ್ತಾರೆ.

ಜೊತೆಗೆ ಕೂಡ್ಲಿಗಿ ತಾಲೂಕಿನಲ್ಲಿ ಬರುವ ಹೆಸರಾಂತ ದೇವಸ್ಥಾನ ಶ್ರೀ ಗುರು ಕೊಟ್ಟೂರು ಬಸವೇಶ್ವರ ಜಾತ್ರೆ ಹಾಗೂ ರಥೋತ್ಸವಕ್ಕೆ ಬೇಡರು ಹೋಗಿ ಬರುತ್ತಾರೆ. ಇದರ ಕಾರ್ತಿಕೋತ್ಸವಕ್ಕೂ ಭೇಟಿ ನೀಡುತ್ತಾರೆ. ಪ್ರತಿ ಅಮವಾಸ್ಯೆಗೂ ಕೊಟ್ಟೂರಿನ ದೇವಸ್ಥಾನಕ್ಕೆ ಹೋಗುವ ಪದ್ಧತಿ ಇದೆ.

ಇದರಂತೆ ದೂರದಲ್ಲಿರುವ ಇನ್ನು ವಿವಿಧ ಜಾತ್ರೆ, ರಥೋತ್ಸವಕ್ಕೆ ಬೇಡರು ಹೋಗುತ್ತಾರೆ. ಉಕ್ಕಡಗಾತ್ರಿ ಶ್ರೀ ಕರಿಬಸವೇಶ್ವರ, ಉಜ್ಜಿನಿ ತೇರು ಇನ್ನು ಕೆಲವು ಬೇಡರ ದೈವಗಳಾದ ನಾಯಕನಹಟ್ಟಿ ಬಂಡ್ರಿ ಚಿನ್ನಪುರದಯ್ಯ ಹಾಗೂ ಚಿಲನಹಟ್ಟಿ ಮಾರ್ಗದಯ್ಯ ಇತ್ಯಾದಿ ಜಾತ್ರೆಗಳಿಗೆ ಹೋಗುವುದನ್ನು ಕಾಣಬಹುದು. ಇದರಿಂದ ಬೇಡರಲ್ಲಿ ಉಂಟಾದ ಬದಲಾವಣೆಗಳು ವೇದ್ಯವಾಗುತ್ತವೆ.

**ವಾಲ್ಮೀಕಿ ಜಯಂತಿ**

ಇದು ಕರ್ನಾಟಕದ ಪ್ರತಿಯೊಂದು ಊರುಗಳಲ್ಲಿ ಹೆಚ್ಚಾಗಿ ಬೇಡರು ನೆಲೆಸಿರುವ ಪ್ರದೇಶಗಳಲ್ಲಿ ಜರುಗುವ ಉತ್ಸವವಾಗಿದೆ. ಇದರಂತೆ ಕೂಡ್ಲಿಗಿಯಲ್ಲಿ ವಾಲ್ಮೀಕಿ ಜಯಂತಿಯನ್ನು ಪ್ರತಿವರ್ಷ ಸೀಗೆ ಹುಣ್ಣಿಮೆ ದಿನದಂದು ಆಚರಿಸುತ್ತಾರೆ. ಇದು ಇತ್ತೀಚೆಗಷ್ಟೇ ಬೆಳೆದುಬಂದಿರುವ ಒಂದು ಆಚರಣೆಯಾಗಿದೆ. ಬೇಡರಲ್ಲಿ ವಾಲ್ಮೀಕಿಯನ್ನು ಮೂಲಪುರುಷನೆಂದು ನಂಬಲಾಗಿದೆ. ಕೂಡ್ಲಿಗಿಯಲ್ಲಿ ವಾಲ್ಮೀಕಿ ಮಹರ್ಷಿಗೆ ಸಂಬಂಧಿಸಿದ ಪ್ರತ್ಯೇಕ ದೇವಸ್ಥಾನವಿದೆ. ಪ್ರತಿವರ್ಷ ಈ ಜಯಂತಿಯಂದು ಊರಿನಲ್ಲಿರುವ ಮ್ಯಾಸ ಹಾಗೂ ಊರುಬೇಡರು ಸೇರಿ ಒಟ್ಟಿಗೆ ಸೌಹಾರ್ದಯುತವಾಗಿ ಆಚರಿಸುತ್ತಾರೆ.

ಅಂದಿನ ದಿನ ಇವರು ದೇವಸ್ಥಾನದಲ್ಲಿ ಬೆಳಿಗ್ಗೆಯಿಂದ ಮಧ್ಯಾಹ್ನ ೩ ಗಂಟೆಯವರೆಗೆ ಊರಿನಲ್ಲಿರುವ ಎಲ್ಲ ಬೇಡರು ದರ್ಶನ ಪಡೆದುಕೊಂಡು ಹೋಗುತ್ತಾರೆ. ೩ ಗಂಟೆ ಮೇಲ್ಪಟ್ಟು ಶ್ರೀ ವಾಲ್ಮೀಕಿಯ ಭಾವಚಿತ್ರವನ್ನು ಮೆರವಣಿಗೆ ಮೂಲಕ ಊರಿನ ಪ್ರಮುಖ ರಸ್ತೆಗಳಲ್ಲಿ ಹೊರಡಿಸುತ್ತಾರೆ. ಅಂದು ವಿಶೇಷ

ರೀತಿಯ ಕುಣಿತ, ಡೊಳ್ಳು, ಉರುಮೆ, ಹಲಗೆ, ಕೀಲ್ಕುದುರೆ, ಇತ್ಯಾದಿಗಳು ಬಂದು ಅದಕ್ಕೆ ಮೆರಗನ್ನು ನೀಡುತ್ತವೆ. ೨೦೦೨ರಲ್ಲಿ ನಡೆದ ಜಯಂತಿಯಲ್ಲಿ ಈ ಊರಿನ ಪ್ರಮುಖ ಬೀದಿಯಲ್ಲಿ ಶ್ರೀ ರಾಜಾ ವೀರ ಮದಕರಿನಾಯಕ ವೃತ್ತವನ್ನು ನಿರ್ಮಿಸಲಾಯಿತು. ಇಂತಹ ಆಚರಣೆ, ಜಯಂತಿ ಈ ಹಿಂದೆ ಇರಲಿಲ್ಲ. ಪ್ರತಿವರ್ಷ ಈ ಜಯಂತ್ಯೋತ್ಸವದಲ್ಲಿ ಏನಾದರೂ ಒಂದು ವಿಶೇಷತೆ ಇದ್ದೇ ಇರುತ್ತದೆ. ಅಂದು ಕೆಲವು ವ್ಯಕ್ತಿಗಳು ಕೆಲವು ವೇಷಗಳನ್ನು ಧರಿಸುತ್ತಾರೆ. ಊಟದ ವ್ಯವಸ್ಥೆ ಕೂಡ ಹಮ್ಮಿಕೊಳ್ಳಲಾಗುತ್ತದೆ. ಇದಕ್ಕೆ ಹಲವಾರು ಜನರು ಸುತ್ತ ಗ್ರಾಮೀಣ ಪ್ರದೇಶದವರು ಬಂದಿರುತ್ತಾರೆ.

ಇಂತಹ ಜಯಂತಿಗಳಿಂದಾಗಿ ಅಥವಾ ಆಚರಣೆಗಳಿಂದಾಗಿ ನಮಗೆ ತಿಳಿದು ಬರುವ ಮುಖ್ಯ ಅಂಶವೆಂದರೆ ಒಂದು ಕಾಲದಲ್ಲಿ ಮ್ಯಾಸಬೇಡರು ಹಾಗೂ ಊರುಬೇಡರು ಬೇರೆ ಎಂಬ ಭಾವನೆ ಇತ್ತು ಕ್ರಮೇಣವಾಗಿ ಇವರಲ್ಲಿರುವ ಈ ಭಾವನೆ ಮರೆತು, ಇಂತಹ ಆಚರಣೆ, ಜಯಂತಿಗಳಲ್ಲಿ ಭೇದವಿಲ್ಲದೆ ಸಾಮೂಹಿಕವಾಗಿ ನೆರವೇರಿಸಿಕೊಂಡು ಹೋಗುತ್ತಾರೆ. ಇದರಿಂದ ಇವರಲ್ಲಿನ ಇತರರೊಂದಿಗೆ ಬೆರೆಯುವ ಹಾಗೂ ಪರಸ್ಪರ ಸೌಹಾರ್ದಯುತವಾಗಿ ಬದುಕುವ ಪದ್ಧತಿ ಬೆಳೆದು ಬಂದಿದೆ. ಇದರಿಂದಾಗಿ ಇನ್ನು ಮುಂದೆ ಬರುವ ಹೊಸ ತಲೆಮಾರುಗಳಿಗೆ ಮ್ಯಾಸಬೇಡರು ಹಾಗೂ ಊರುಬೇಡರು ಬೇರೆ ಎಂಬ ಭಾವನೆ ಬರದಂತೆ ತನ್ನ ಪಾತ್ರ ವಹಿಸುತ್ತಿದೆ ಎಂದು ಹೇಳಬಹುದು.

**೫.೫ ಧಾರ್ಮಿಕ ವಿಧಿ ವಿಧಾನಗಳು**

ಇತ್ತೀಚಿನ ದಿನಗಳಲ್ಲಿ ಬೇಡರಲ್ಲಿ ಧಾರ್ಮಿಕವಾಗಿ ತುಂಬಾ ಬದಲಾವಣೆಗಳಾಗಿವೆ ಎಂಬುದು ಸತ್ಯದ ಮಾತಾಗಿದೆ. ಬೇಡರ ದೇವರ ಪೂಜೆ ಮೊದಲಾದ ವಿಷಯಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ಕಾಣಬಹುದು. ಮೊದಲಿಗೆ ಮ್ಯಾಸಬೇಡರು ಹೆಚ್ಚಾಗಿ ಶೈವ ಸಂಪ್ರದಾಯದವರಾಗಿದ್ದರು ಅದರಂತೆ ಊರುಬೇಡರು ಹೆಚ್ಚಾಗಿ ವೈಷ್ಣವ ಸಂಪ್ರದಾಯದವರಾಗಿದ್ದರು ಕಾಲ ಬದಲಾದಂತೆ ಜೊತೆಗೆ ಇವರಲ್ಲಿ ಕೂಡ ಬದಲಾವಣೆಗಳಾಗ ತೊಡಗಿದವು. ಇಂದು ನಾವು ಇವರಿಬ್ಬರಲ್ಲಿಯೂ ಎರಡು ಸಂಪ್ರದಾಯಗಳಿರುವುದನ್ನು ಕಾಣುತ್ತೇವೆ. ಇಲ್ಲಿ ಇವರ ಪೆಟ್ಟಿಗೆ ದೇವರುಗಳಿಗಿಂತ ಇತರೆ ದೇವತೆಗಳಿಗೆ ಆದ್ಯತೆ ನೀಡಿರುವುದು ಕಂಡುಬರುತ್ತದೆ. ಈ ಎರಡೂ ಗುಂಪುಗಳಲ್ಲಿ ಇಂದು ಕೆಲವರ ಮನೆ ದೇವರು ಆಂಜನೇಯ ಆಗಿರುವುದನ್ನು ಗಮನಿಸಬಹುದು. ಇನ್ನು ಕೆಲವರಿಗೆ ತಮ್ಮ ಮನೆ ದೇವರು ಯಾವುದು ಅದು ಎಲ್ಲಿದೆ ಎಂಬದೂ ಸಹ ತಿಳಿದಿಲ್ಲ ಒಂದುವೇಳೆ ಮನೆಯಲ್ಲಿ ಹಳೆ ತಲೆಮಾರಿನವರಿದ್ದರೆ ಮಾತ್ರ ಗೊತ್ತಾಗುತ್ತದೆ. ಇಲ್ಲಿ ಬರುವ ಎಲ್ಲ ಹಬ್ಬ, ಜಾತ್ರೆ ಹಾಗೂ ಉತ್ಸವಗಳನ್ನು ಎಲ್ಲರು ಸಾಮೂಹಿಕವಾಗಿ ಒಂದೆಡೆ ಸೇರಿ ಒಂದೇ ರೀತಿಯಲ್ಲಿ ಆಚರಿಸುತ್ತಾರೆ. ಯುಗಾದಿ, ದಸರಾ, ಪಂಚಮಿ ಇಂತಹ ಹಬ್ಬಗಳನ್ನು ಇವರು ಒಂದೇ ಬಗೆಯಲ್ಲಿ ಆಚರಿಸುವ ಪದ್ಧತಿ ಇದೆ.

ದೇವರ ವಿಷಯಗಳಲ್ಲಿ ಸಾಕಷ್ಟು ಬದಲಾವಣೆ ಕಂಡುಬಂದಿದ್ದೇವೆ. ಕೆಲವರು ತಮ್ಮ ಮನೆದೇವರಿಗೆ ಹೋಗದಿದ್ದರೂ ಸಹ ವರ್ಷಕ್ಕೊಮ್ಮೆಯಾದರೂ ಧರ್ಮಸ್ಥಳ, ಮಂತ್ರಾಲಯ, ತಿರುಪತಿಗೆ ಹೋಗಿ ದೇವರ ದರ್ಶನ ಪಡೆದು ಬರುತ್ತಾರೆ. ಇಂದು ಬೇಡರಲ್ಲಿ ಶಬರಿಮಲೈ ಸ್ವಾಮಿ ಅಯ್ಯಪ್ಪ ಸಹ ಆರಾಧನೆಗೆ ಒಳಪಟ್ಟಿರುವುದನ್ನು ಗಮನಿಸಬಹುದಾಗಿದೆ. ವರ್ಷಕ್ಕೊಮ್ಮೆ ಬೇಡರಲ್ಲಿ ಹಲವಾರು ಜನರು ಶಬರಿಮಲೈಸ್ವಾಮಿ

ಮಾಲೆ ಧರಿಸಿ 'ಇರುಮುಡಿ' ಹೊತ್ತು ಶಬರಿಮಲೈಗೆ ಹೋಗಿ ಬರುತ್ತಾರೆ. ತಮ್ಮ ಮಕ್ಕಳಿಗೆ ಹಿಂದೆ ತಮ್ಮ ಮನೆದೇವರುಗಳಿಗೆ ಜವಳ ತೆಗೆಸುವ ರೂಢಿ ಇತ್ತು. ಆದರೆ ಇಂದು ತಮ್ಮ ಮಕ್ಕಳನ್ನು ಧರ್ಮಸ್ಥಳಕ್ಕೊ, ಮಂತ್ರಾಯಲಯ, ತಿರುಪತಿಗೋ ಕರೆದುಕೊಂಡು ಹೋಗಿ 'ಜವಳ' ತೆಗೆಸುವ ಕ್ರಮ ಅನುಸರಿಸುತ್ತಿದ್ದಾರೆ. ಎಷ್ಟೋ ಜನ ಬೇಡರು ಇದರಿಂದಾಗಿ ಮಾಂಸ ಊಟವನ್ನು ತ್ಯಜಿಸಿದ್ದಾರೆ. ಮನೆಯಲ್ಲಿ ಆಕಳು ಪೂಜೆ, ಕೃಷಿ ಸಂಬಂಧಿತ ಹಲವು ಆಚರಣೆಗಳು ಇಲ್ಲಿ ಇಂದು ಮಾಯವಾಗುತ್ತಿವೆ. ಮಳೆಗಾಗಿ ಹಿಂದೆ ಇಲ್ಲಿ ಕಪ್ಪೆಗಳ ಮದುವೆ, ಕತ್ತೆಗಳ ಮೆರವಣಿಗೆ ಮೊದಲಾದ ಆಚರಣೆ ಮಾಡುತ್ತಿದ್ದರು. ಅವು ಈಗ ಕಾಣಿಸುತ್ತಿಲ್ಲ. ಅಂದಿನ ದಿನಗಳಲ್ಲಿ ಇವರು ಧಾನ್ಯಗಳನ್ನು ಹುಲ್ಲಿನಿಂದ ಬೇರ್ಪಡಿಸಲು ಕಲ್ಲಿನ ಗುಂಡುಗಳನ್ನು ಬಳಸಿ ಕಣಗಳಲ್ಲಿ ರಾಶಿಮಾಡಿ ಅದಕ್ಕೆ ಪೂಜೆ ಸಲ್ಲಿಸುತ್ತಿದ್ದರು. ಆದರೆ ಇಂದು ಇದಕ್ಕೆ ಬೇರೆ ಕ್ರಮವನ್ನೇ ಅನುಸರಿಸುತ್ತಿದ್ದಾರೆ. ಕಾಳುಗಳನ್ನು ಬೇರ್ಪಡಿಸಲು ತೆನೆಗಳನ್ನು ರಸ್ತೆಗೆ ಹಾಕುತ್ತಾರೆ. ಹೀಗಿರುವಾಗ ಅವರಲ್ಲಿ ಈ ಕೃಷಿಗೆ ಸಂಬಂಧಿಸಿದ ಆಚರಣೆಗಳು ಅವರಲ್ಲಿ ಅನಿವಾರ್ಯವಾಗಿ ತಪ್ಪಿಸಿಕೊಂಡು ಹೋಗುತ್ತವೆ. ಇನ್ನು ಕೆಲವು ಜನ ಗೃಹಪ್ರವೇಶದ ಸಂದರ್ಭದಲ್ಲಿ ಪುರೋಹಿತರನ್ನು ಕರೆಸಿ ಕೆಲವು ಯಜ್ಞ ಮಾಡಿಸುವ ಘಟನೆಗಳೂ ಇಲ್ಲದಿಲ್ಲ. ಇಂತಹ ಹಲವಾರು ವಿಷಯಗಳನ್ನು ನಾವು ಸೂಕ್ಷ್ಮವಾಗಿ ಗಮನಿಸಿದಾಗ ಇವರಲ್ಲಾದ ಪರಿವರ್ತನೆ ಅರಿವು ನಮಗಾಗುತ್ತದೆ. ಆದರೆ ಇವರು ಕೆಲವು ಅಂಶಗಳನ್ನು ಕೈಬಿಡದೇ ಅವುಗಳಿಗೆ ಪರ್ಯಾಯ ವ್ಯವಸ್ಥೆ ಮಾಡಿಕೊಂಡಿರುವುದು ವಿಶೇಷವಾದ ಸಂಗತಿ.

**ಅಡಿಟಿಪ್ಪಣಿಗಳು**

೧. ಎಂ.ಜಿ. ಈಶ್ವರಪ್ಪ, ಮ್ಯಾಸಬೇಡರು, ಪು. ೧೩
೨. ಅದೇ, ಪು. ೧೫
೩. ಅದೇ, ಪು. ೨೦
೪. ಡಾ. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಪು. ೯೯
೫. ಎಂ.ಜಿ. ಈಶ್ವರಪ್ಪ, ಮ್ಯಾಸಬೇಡರು, ಪು. ೩೭
೬. ಎಂ.ಪಿ. ವೀಣಾ, ಮನೆ, ಸಮಾಜ ಮತ್ತು ಸಂಸ್ಕೃತಿ, ಪು. ೫೪
೭. ಎಸ್.ಎಸ್. ಹಿರೇಮಠ, ಜಾತ್ರೆಗಳು (ಕರ್ನಾಟಕ ದಲಿತರ ಸಂಪದ), ಭಾಗ-೨, ಪು. ೪೨
೮. ಡಾ. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಪು. ೧೧೪
೯. ಎಸ್.ಎಸ್. ಹಿರೇಮಠ, ಜಾತ್ರೆಗಳು, ಪು. ೧೧

# ೬

# ಸಮಾರೋಪ

ಕೂಡ್ಲಿಗಿ ಪಟ್ಟಣದ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಬೇಡರ ನೆಲೆಗಳಿಗೆ ಭೇಟಿ ನೀಡಿ ಅವರ ಜೀವನ ವಿಧಾನ ಅವರ ಸಂಸ್ಕೃತಿಯನ್ನು ಸಂಪ್ರದಾಯವನ್ನು ಸಮಾಜಶಾಸ್ತ್ರೀಯ ವ್ಯಾಪ್ತಿಯಲ್ಲಿ ಬರುವ ಸಾಮಾಜಿಕ ಬದಲಾವಣೆ ದೃಷ್ಟಿಯಿಂದ ಪರಿಶೀಲಿಸಿ ಈ ಪ್ರಬಂಧವನ್ನು ಬರೆಯಲಾಗಿದೆ. ಈ ಪ್ರಬಂಧಕ್ಕೆ ಸಂಬಂಧಿಸಿದಂತೆ ಇದರ ನಿರೂಪಣೆಯನ್ನು ಹೆಚ್ಚಾಗಿ ಕ್ಷೇತ್ರಕಾರ್ಯದಿಂದ ಬಂದಿರುವ ಮಾಹಿತಿಗಳನ್ನು ಬಳಸಿಕೊಂಡು ಅಗತ್ಯವಿದ್ದಡೆ ಇತರೆ ಆಕರಗಳನ್ನು ಬಳಸಿ ದಾಖಲಿಸಲಾಗಿದೆ.

ಬಳ್ಳಾರಿ ಜಿಲ್ಲೆಯಾದ್ಯಂತ ದಟ್ಟವಾಗಿ ಈ ಸಮುದಾಯ ನೆಲೆಸಿದೆ. ಕೆಲವು ಜನರು ನಾಗರೀಕತೆ ಸೋಂಕಿಲ್ಲದ ಹಳ್ಳಿಗಾಡುಗಳಲ್ಲಿ ನೆಲೆಸಿದ್ದರೆ ಇನ್ನು ಕೆಲವು ಜನರು ಅತ್ಯಂತ ಮುಂದುವರೆದ ಮಹಾನಗರಗಳಲ್ಲಿ ಜೀವಿಸುತ್ತಿದ್ದಾರೆ. ಇಂತಹ ಪ್ರದೇಶಗಳಲ್ಲಿ ಬದುಕುತ್ತಿರುವ ಕೆಲವು ಬುಡಕಟ್ಟು ಜನರ ಜೀವನ ವಿಧಾನವು ಬದಲಾವಣೆಗೊಂಡಿದೆ. ಇನ್ನು ಬೆಳವಣಿಗೆ ಹಂತದಲ್ಲಿರುವ ಕೂಡ್ಲಿಗಿ ಪಟ್ಟಣದಂತಹ ಪ್ರದೇಶಗಳಲ್ಲಿ ಜೀವಿಸುವ ಜನರು ಕೂಡ ಜೊತೆ ಜೊತೆಗೆ ಪರಿವರ್ತನೆಗೊಳ್ಳುತ್ತ ಲಿದ್ದಾರೆ. ಇಂತಹ ಪ್ರಸಂಗಗಳನ್ನು ನಾವು ಕೂಡ್ಲಿಗಿ ಪಟ್ಟಣದ ಬೇಡರಲ್ಲಿ ಕಾಣುತ್ತೇವೆ. ಈ ಸಮುದಾಯದ ಜನರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗು ಸಾಂಸ್ಕೃತಿಕ ಬದುಕಿನಲ್ಲಿನ ವಿಶೇಷತೆ ಹಾಗು ಇವುಗಳಲ್ಲಾದ ಕೆಲವು ಬದಲಾವಣೆಗಳನ್ನು ಅತಿ ಸೂಕ್ಷ್ಮವಾಗಿ ಅವಲೋಕಿಸಿ ವಿಶ್ಲೇಷಿಸಲಾಗಿದೆ. ಆದರೆ ಇಲ್ಲಿ ನಮ್ಮ ಗಮನಕ್ಕೆ ಬರುವ ಅಂಶದೆಂದರೆ ಇಲ್ಲಿನ ಜನರು ತಮ್ಮ ಸಂಸ್ಕೃತಿಯನ್ನು ಸಂಪೂರ್ಣವಾಗಿ ಬಿಡದೆ ಹಾಗು ಪೂರ್ಣವಾಗಿ ಒಪ್ಪಿಕೊಳ್ಳದೇ ಬಿಸಿತುಪ್ಪವನ್ನು ಬಾಯಿಯಲ್ಲಿರಿಸಿಕೊಂಡಂತೆ

ಭಾಸವಾಗುತ್ತದೆ. ಕೆಲವು ವಿಷಯಗಳನ್ನು ಗಮನಿಸಿದಾಗ ಅವುಗಳು ಸಂಪೂರ್ಣ ಬದಲಾಗಿವೆ. ಅದೇ ರೀತಿ ಕೆಲವು ವಿಷಯಗಳನ್ನು ಕೈಬಿಡದೆ ಅವುಗಳಿಗೆ ಪರ್ಯಾಯ ವ್ಯವಸ್ಥೆ ಕಂಡುಕೊಂಡಿರುವ ಪ್ರಸಂಗಗಳನ್ನು ಕಾಣುತ್ತೇವೆ.

ಇನ್ನು ಇವರ ಕಸುಬುಗಳು ಹಾಗು ವೃತ್ತಿಗಳ ಬಗ್ಗೆ ನೋಡಿದರೆ ಅದರಲ್ಲಿ ಗಣನೀಯ ಪ್ರಮಾಣದಲ್ಲಿ ಪರಿವರ್ತನೆಗಳಾಗಿರುವುದು ವೇದ್ಯವಾಗುತ್ತದೆ. ಇಂದಿನ ದಿನಗಳಲ್ಲಿ ಇವರು ತಮ್ಮ ಮೂಲವೃತ್ತಿಯನ್ನು ಅನುಸರಿಸಿ ಅಂದರೆ ಬೇಟೆ ವೃತ್ತಿಯನ್ನು ಅನುಸರಿಸಿ ಜೀವನ ಸಾಗಿಸುವುದೆಂದರೆ ಅದು ಅಸಾಧ್ಯದ ಮಾತಾಗಿದೆ. ಏಕೆಂದರೆ ಇವರ ಆರ್ಥಿಕ ಬದುಕಿನಲ್ಲಾದ ಬದಲಾವಣೆಗಳು ಹಾಗು ಬೇಟೆಗೆ ನಿಷೇಧ ಹೇರಿರುವ ಕಾನೂನುಗಳು ಆದರೆ ಬಡತನವೆಂಬುದು ಇವರನ್ನು ಕಾಡುತ್ತಿರುವ ಸಮಸ್ಯೆಯಾಗಿದೆ. ಕೆಲವು ವಾರ್ಡ್‌ಗಳಲ್ಲಿ ಜೀವಿಸುತ್ತಿರುವ ಜನರು ತಮ್ಮ ಒಂದು ಹೊತ್ತಿನ ಊಟಕ್ಕಾಗಿ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಿದೇ ಅತೀ ಚಿಕ್ಕವಯಸ್ಸಿನಲ್ಲೇ ಅವರನ್ನು ಕೆಲಸಕ್ಕೆ (ಕೂಲಿ) ಕಳಿಸುವ ಸಾಕಷ್ಟು ಉದಾಹರಣೆಗಳಿವೆ. ಇದರಿಂದಾಗಿ ಬಾಲಕಾರ್ಮಿಕ ಸಮಸ್ಯೆಯೂ ಈ ಪ್ರದೇಶದಲ್ಲಿದೆ. ಬ್ಯಾಂಕುಗಳು, ಸಹಕಾರಿ ಸಂಘಗಳು ಇಂದು ಕೇವಲ ಇಲ್ಲಿ ಮಾತ್ರವಲ್ಲದೇ ಎಲ್ಲ ಕಡೆಗೂ ಹಣದ ಸಹಾಯ ಮಾಡುತ್ತದೆ. ಅದು ಹೇಗೆ ಎಂದರೆ ನಮಗೆ ೧೦ ರೂಪಾಯಿ ಸಾಲ ಬೇಕೆಂದರೆ ಅದಕ್ಕೆ ೨೦ ರೂಪಾಯಿ ಮೌಲ್ಯದ ಆಸ್ತಿ ಇತ್ಯಾದಿಗಳನ್ನು ಶೂರಿಟಿ ಕೊಡಬೇಕಾಗುತ್ತದೆ. ಇಂತಹ ಪರಿಸ್ಥಿತಿಗಳಲ್ಲಿ ಬಡಜನರು ಸಾಲಕೇಳಲು ಹೇಗೆ ತಾನೇ ಹೋಗುತ್ತಾರೆ ಹೀಗಿರುವಾಗ ತಮ್ಮ ಉಪಜೀವನ ಸಾಗಿಸಲು ಮಹಿಳೆಯರು, ಮಕ್ಕಳು ದೂರದಲ್ಲಿರುವ ಕಾಡುಗಳಲ್ಲಿ ಸಿಗುವ ವಿವಿಧ ರೀತಿಯ ಹಣ್ಣು ಹಂಪಲಗಳನ್ನು ಮಾರಾಟಮಾಡಿ ಜೀವನ ಸಾಗಿಸಿದರೆ ಇನ್ನು ಕೆಲವರು ಊಟದ ಎಲೆಯನ್ನು ತಯಾರಿಸಿ ಮಾರಾಟಮಾಡಿ ಜೀವನ ಸಾಗಿಸುತ್ತಿದ್ದಾರೆ. ಇಲ್ಲಿ ಬೇಡರು ಆರ್ಥಿಕವಾಗಿ ಎಷ್ಟು ಮುಂದುವರೆದಿದ್ದಾರೋ ಅಷ್ಟೇ ಪ್ರಮಾಣದಲ್ಲಿ ಹಿಂದುಳಿದ ಜನರೇ ಇದ್ದಾರೆ.

ಸಾಮಾಜಿಕ ಸಂಸ್ಥೆಗಳ ವಿಷಯಕ್ಕೆ ಬಂದಾಗ ಇವರಲ್ಲಿ ಕೆಲವು ಪರಿವರ್ತನೆಗಳಾಗಿವೆ ಎಂಬುದನ್ನು ತಿಳಿಯಬಹುದು. ಹಿಂದೆ ಬೇಡರ ಎರಡು ಉಪಪಂಗಡಗಳಾದ ಮ್ಯಾಸಬೇಡರು ಹಾಗು ಊರುಬೇಡರ ನಡುವೆ ಇದ್ದ ವ್ಯತ್ಯಾಸ ಇಂದು ಕಡಿಮೆಯಾಗುತ್ತಿವೆ ಎನಿಸುತ್ತದೆ. ಕುಟುಂಬ, ಬಂಧುತ್ವ ಇವುಗಳಲ್ಲಿ ಕೆಲವು ಬದಲಾವಣೆಗಳಾಗಿವೆ. ಅದರಂತೆ ವಿವಾಹದ ವಿಷಯಕ್ಕೆ ಬಂದಾಗ ಕೂಡ್ಲಿಗಿಯಲ್ಲಿ ಸಾಕಷ್ಟು ಬದಲಾವನೆಗಳಾಗಿರುವುದು ಕಂಡುಬರುತ್ತದೆ. ಹಿಂದೆ ಮ್ಯಾಸಬೇಡರು ಹಾಗು ಊರುಬೇಡರು ವಿವಾಹವಾಗುವಂತಿರಲಿಲ್ಲ ಆದರೆ ಇಂದು ಇದು ಸಾಮಾನ್ಯವಾದ ವಿಷಯವಾಗಿದೆ. ಇದು ಒಂದು ಬದಲಾವಣೆ. ಅದೇ ರೀತಿ ಇವರಲ್ಲಿ ಹಿಂದೆ ವರದಕ್ಷಿಣೆ ಪದ್ಧತಿ ಇರಲಿಲ್ಲ ಆದರೆ ಕಾಲಕ್ಕನುಗುಣವಾಗಿ ಇವರಲ್ಲಿ ಕೂಡ ಇಂದು ವರದಕ್ಷಿಣೆ ಪದ್ಧತಿ ಕಾಣುತ್ತೇವೆ. ಇದರಿಂದ ಕೆಲವು ಕುಟುಂಬಗಳ ಮಧ್ಯ ವಿರಸವುಂಟಾಗಿರುವುದು ಅಲ್ಲಲ್ಲಿ ಕಂಡುಬರುವ ವಿಷಯಗಳಾಗಿವೆ. ತೆರವು ಪದ್ಧತಿ ಸಂಪೂರ್ಣವಾಗಿ ನಶಿಸಿಹೋಗಿರುವ ಕಾಲ ಇದಾಗಿದೆ. ಇನ್ನು ಪಂಚಾಯ್ತಿ ತೀರ್ಮಾನಗಳಲ್ಲಿ ಆದ ಬದಲಾವಣೆ ಹೇಳತೀರದು. ಇಂದು ಆಗಿನ ಕಾಲದಲ್ಲಿ ಇದ್ದಂತೆ ಪಂಚಾಯ್ತಿ ತೀರ್ಮಾನಗಳೇ ಇಂದು ಕಾಣದಂತೆ ಆಗಿದೆ. ಇವರಲ್ಲಿ ಕಾನೂನು, ಪೋಲೀಸು ಇತ್ಯಾದಿಗಳ ಪ್ರದೇಶವಾಗಿದೆ. ಹಾಗು ಇವು ತನ್ನ ಹಿಡಿತವನ್ನು ಸಂಪೂರ್ಣವಾಗಿ ಸಾಧಿಸಿವೆ.

ಉಡುಗೆ - ತೊಡುಗೆಗಳಲ್ಲಿ ಕೂಡ ಮಹತ್ತರವಾದ ಬದಲಾವಣೆಗಳಾಗಿರುವುದು ನಮ್ಮ ಕಣ್ಣಿಗೆ ಗೋಚರಿಸುವ ಸತ್ಯವಾಗಿದೆ. ಹಿಂದೆ ಇದ್ದ ಇವರ ವಿಶೇಷ ರೀತಿಯ ವಸ್ತು ಆಭರಣಗಳು ಮಾಯವಾಗಿವೆ. ಆಧುನಿಕ ರೀತಿಯ ಉಡುಗೆ-ತೊಡುಗೆಗಳು ಇವರಲ್ಲಿ ಕಂಡುಬರುತ್ತದೆ. ಕಂಬಳಿ, ಪಂಚೆ, ಚಲ್ಲಣಗಳು ಈಗ ನೋಡುತ್ತೇವೆ ಎಂದರೂ ಸಿಗಲಾರದಂತಾಗಿವೆ. ಇವರ ವೇಷ ಭೂಷಣಗಳಿಂದ ಬೇಡರನ್ನು ಗುರುತಿಸುವ ಕಾಲ ಇದಲ್ಲ ಎಂದು ಹೇಳಬಹುದು. ಹಳ್ಳಿ ಪ್ರದೇಶಗಳಲ್ಲಿ ಈಗ ಕೆಲವೇ ಜನರು ಮಾತ್ರ ಪಂಚೆ ಧರಿಸುವುದು ಕಂಡುಬರುತ್ತದೆ. ಆದರ ಪಟ್ಟಣಗಳಲ್ಲಿ ಇದರ ಸುಳಿವೆಯೇ ಇಲ್ಲದಂತಾಗಿದೆ. ಒಟ್ಟಾರೆ ಇವರ ಉಡುಗೆ-ತೊಡುಗೆಗಳಲ್ಲಿ ಸಾಕಷ್ಟು ಪರಿತರ್ವನೆಗಳಾಗಿರುವುದು ತಿಳಿದುಬರುತ್ತದೆ. ಒಂದು ಕಾಲದಲ್ಲಿ ಬೆಳ್ಳಿ ಬಂಗಾರದ ಬಗ್ಗೆ ತಿಳಿಯದೇ ಇರುವ ಈ ಜನರು ಇಂದು ಇವುಗಳಿಗೆ ಹೆಚ್ಚು ಒತ್ತಾಸೆ ನೀಡುತ್ತಿದ್ದಾರೆ. ಆಸ್ತಿ, ಸಂಪತ್ತು ಗಳಿಸುವ ಕಡೆಗೆ ತಮ್ಮ ಗಮನ ಹರಿಸುತ್ತಿದ್ದಾರೆ. ಇದರೊಂದಿಗೆ ಇವರಲ್ಲಿರುವ ಬಂಧುತ್ವ ಭಾವನೆ ನಾವು ನಮ್ಮವರು ಎಂಬುವ ಭಾವನೆಗಳು ಸ್ವಲ್ಪ ಸಡಿಲಗೊಂಡಿವೆ. ಆದರೆ ಬಡತನದಲ್ಲಿರುವ ಜನರಲ್ಲಿ ಇದರ ಬಗ್ಗೆ ಅಂದರೆ ಬಂಧುತ್ವದ ಕಾಳಜಿ ಇದೆ ಎಂದೆನಿಸುತ್ತದೆ. ಬದಲಾವಣೆ ಗಾಳಿಯಿಂದಾಗಿ ಇವರಲ್ಲಿರುವ ಸಾಕಷ್ಟು ವಿಷಯಗಳು ಪಲ್ಲಟಗೊಂಡಿವೆ ಅವುಗಳ ಬದಲಿಗೆ ಪರ್ಯಾಯ ವ್ಯವಸ್ಥೆಗಳೂ ಬಂದಿರುವುದು ತಿಳಿದುಬರುತ್ತದೆ.

ಸಮಾಜ ಬಂದಲಾದಂತೆಲ್ಲ ಇವರ ಜೀವನ ಕ್ರಮಗಳೂ ಸಹ ಸಂಕೀರ್ಣಗೊಳ್ಳುತ್ತಿವೆ ಇದರ ಜೊತೆಗೆ ಇವರಿಗೆ ನಾನಾ ರೀತಿಯ ಸಮಸ್ಯೆಗಳು ತಲೆದೋರಿವೆ. ಇಷ್ಟೆಲ್ಲ ಬದಲಾವಣೆಗಳ ನಡುವೆ ಇಲ್ಲಿನ ಬೇಡ ಸಮುದಾಯದ ಜನರು ಇತರೆ ಸಮುದಾಯದವರೊಂದಿಗೆ ಉತ್ತಮವಾಗಿ ನಡೆದುಕೊಂಡು ಬಂದಿದ್ದಾರೆ. ಅವರ ಜೊತೆಗೆ ಬೆರೆತು ಬಾಳುತ್ತಿದ್ದಾರೆ. ಜೀವನದ ಮೌಲ್ಯಗಳಲ್ಲಿ ಪರಿವರ್ತನೆಗಳಾಗುತ್ತಿವೆ. ಇತರೆ ಸಮುದಾಯದವರ ಪ್ರಭಾವ ಇವರ ಮೇಲೆ ಬಿದ್ದಿರುವುದರಿಂದ ಇಲ್ಲಿ ನೆಲೆಸಿರುವ ಇವರ ಜೀವನ ವಿಧಾನಗಳಲ್ಲಿ ಬದಲಾವಣೆಗಳಾಗಿರುವುದು ಕಂಡುಬರುತ್ತದೆ. ಒಂದು ವಿಶೇಷ ಸಗಂತಿ ಎಂದರೆ ಇಲ್ಲಿರುವ ಹೊಸ ತಲೆಮಾರಿನ ಜನರು ಬೇಡರಲ್ಲಿರುವ ಉಪಪಂಗಡಗಳ ಮಧ್ಯೆ ಇರುವ ಭಿನ್ನತೆ ಅಳಿಸಿ ಎರಡು ಪಂಗಡಗಳಲ್ಲಿ ಸಾಮರಸ್ಯ ತರಬೇಕೆಂಬುವ ಮನೋಭಾವ ಉಳ್ಳವರಾಗಿದ್ದಾರೆ ಇದಕ್ಕೆ ಹಿರಿಯರ ಒಪ್ಪಿಗೆ ಇದೆ. ಊರಿನ ಪ್ರತಿಯೊಂದು ಕಾರ್ಯಕ್ರಮಗಳನ್ನು ಕೂಡಿ ಮಾಡುವುದರೊಂದಿಗೆ ಎರಡು ಪಂಗಡದಲ್ಲಿನ ಯುವಕರು ಪರಸ್ಪರ ವಿವಾಹವಾಗುವುದರೊಂದಿಗೆ ಇವರು ಸಾಮರಸ್ಯದಿಂದ ಬಾಳಲು ಪ್ರಯತ್ನಿಸುತ್ತಿದ್ದಾರೆ.

ಪರಿವರ್ತನೆ ಎಂಬುದು ಒಂದು ಸಮಾಜದಲ್ಲಿ ಎಷ್ಟರಮಟ್ಟಿಗೆ ಜೀವನ ವಿಧಾನಗಳಲ್ಲಿ ವಿಕಾಸ ತರುತ್ತದೆಯೇ ಅದೇ ಪ್ರಮಾಣದಲ್ಲಿ ಸಮಾಜದಲ್ಲಿ ನಾನಾ ರೀತಿಯ ಸಮಸ್ಯೆಗಳು ತಲೆದೋರುವಂತೆ ಮಾಡುತ್ತದೆ. ಅಂದರೆ ಇದರಿಂದಾಗುವ ದುಷ್ಪರಿಣಾಮಗಳ ಬಗ್ಗೆಯೂ ನಮ್ಮ ಗಮನದಲ್ಲಿರಬೇಕು. ಕೆಲವು ವಿಷಯಗಳನ್ನು ಇಂದು ಬದಲಾವಣೆಗಳಾಗದಿರುವುದೇ ಒಳ್ಳೆಯದೆಂದು ಅನಿಸುತ್ತದೆ. ಏಕೆಂದರೆ ಕೆಲವು ಪರಿವರ್ತನೆಗಳಿಂದ ಜನರು ವಿವಿಧ ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ.

ನನ್ನ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಇದುವರೆಗೂ ನಾನು ಕಂಡುಕೊಂಡ ವಿಷಯಗಳ ಬಗ್ಗೆ ನನಗೆ ತಿಳಿದಮಟ್ಟಿಗೆ ವಿಶ್ಲೇಷಿಸಿದ್ದೇನೆ. ನನ್ನ ಕಣ್ಣಿಗೆ ಕಾಣದಿರುವ ವಿಷಯಗಳೂ ಇಲ್ಲಿ ಇರಬಹುದು.

ಬದಲಾವಣೆ ಎಂಬುದು ನಿತ್ಯ ನಿರಂತರವಾಗಿ ಸಂಭವಿಸುತ್ತಲೇ ಇರುವಂತಹ ಒಂದು ಸುದೀರ್ಘ ಪ್ರಕ್ರಿಯೆ. ನಾವು ಒಂದು ವಿಷಯದ ಬಗ್ಗೆ ಆಗಿರುವ ಬದಲಾವಣೆಗಳನ್ನು ಹೇಳಿದ ನಂತರದ ಕೆಲವು ಕ್ಷಣಗಳಲ್ಲಿಯೇ ಪುನ: ಅದೇ ವಿಷಯದಲ್ಲಿ ಇನ್ನಾವುದೋ ರೀತಿಯ ಬದಲಾವಣೆ ಸಂಭವಿಸುತ್ತದೆ. ಕಾರಣ ಈ ವಿಷಯವು ಕೈಗೆ ನಿಲುಕದ ವಿಷಯವಾಗಿದೆ. ಕೂಡ್ಲಿಗಿ ಪ್ರದೇಶದಲ್ಲಿ ನೆಲೆಸಿರುವ ಈ ಸಮುದಾಯದವರು ಅಂದರೆ ಮ್ಯಾಸಬೇಡರು ಹಾಗು ಊರುಬೇಡರು ಒಂದಾಗಲು ಸದಾ ಬಯಸುತ್ತಾ ನನಗೆ ತಿಳಿದಿರುವ ಕೆಲವು ವಿಷಯಗಳನ್ನು ನಿಮ್ಮ ಮುಂದೆ ಇರಿಸಿದ್ದೇನೆ. ಇದು ಒಂದು ರೀತಿಯಲ್ಲಿ ನನಗೆ ಸಂಪೂರ್ಣ ತೃಪ್ತಿ ತಂದಿದೆ. ಏಕೆಂದರೆ ನಮ್ಮ ಊರಿನ ಬಗ್ಗೆ ನಮ್ಮ ಊರಿನ ಸಮುದಾಯದ ಬಗ್ಗೆ ಅಧ್ಯಯನ ಕೈಗೊಂಡಿರುವುದರಿಂದ ಇದು ಒಂದು ರೀತಿಯಲ್ಲಿ ನನಗೆ ಸಂತೋಷವನ್ನು ತಂದಿದೆ. ಇಂತಹ ಅಧ್ಯಯನಗಳು ಇನ್ನೂ ಮುಂದೆ ಸಾಕಷ್ಟು ಪ್ರಮಾಣದಲ್ಲಿ ಆಗಬೇಕೆಂಬುದೇ ನನ್ನ ಆಶಯ.

## ವಕ್ತೃ ವಿವರ

| ಹೆಸರು | ವಯಸ್ಸು | ವೃತ್ತಿ | ವಾರ್ಡ್ ಸಂಖ್ಯೆ | ಸಂದರ್ಶನ ದಿನಾಂಕ |
|---|---|---|---|---|
| ಕೆ.ಮಲ್ಲಣ್ಣ | ೫೫ | ಪತ್ರಕರ್ತರು | ೩ | ೧.೧.೨೦೦೩ |
| ಜೆ. ಹನುಮಂತಪ್ಪ | ೬೦ | ನಿವೃತ್ತ ಶಿಕ್ಷಕರು | ೨ | ೩.೧.೨೦೦೩ |
| ಕೆ. ಹೊನ್ನಪ್ಪ | ೬೦ | ನಿವೃತ್ತ ಶಿಕ್ಷಕರು | ೪ | ೫.೧.೨೦೦೩ |
| ಗುಪ್ಪಾಲ ಕೊತ್ಲಪ್ಪ | ೫೮ | ಮಾಜಿ ಅಧ್ಯಕ್ಷರು, ಪ.ಪಂ | ೬ | ೯.೧.೨೦೦೩ |
| ಮ್ಯಾಕಲರ ಭೀಮಪ್ಪ | ೫೦ | ಕೃಷಿ | ೬ | ೧೪.೧.೨೦೦೩ |
| ಪೆದ್ದಪ್ಪ | ೫೨ | ಮಾಂಸ ಮಾರಾಟಗಾರರು | ೬ | ೧೫.೧.೨೦೦೩ |
| ಭರ್ಮಪ್ಪ | ೪೨ | ಹೋಟೆಲು ಉದ್ಯಮ | ೬ | ೧೬.೧.೨೦೦೩ |
| ನರಸಿಂಹಪ್ಪ | ೫೦ | ಜವಾನ | ೭ | ೧೯.೧.೨೦೦೩ |
| ಮುದ್ದಪ್ಪ ಎನ್. | ೪೫ | ಮಾಜಿ ಅಧ್ಯಕ್ಷರು, ಪ.ಪಂ | ೫ | ೨೫.೧.೨೦೦೩ |
| ಪಿ. ಕೊತ್ಲಪ್ಪ | ೩೫ | ಶಿಕ್ಷಕರು | ೪ | ೨.೨.೨೦೦೩ |
| ಬಡಭೀಮಯ್ಯನವರ ಓಬಳಪ್ಪ | ೫೫ | ಕೃಷಿ | ೪ | ೫.೨.೨೦೦೩ |
| ಪಾಲವ್ವನವರ ಭೀಮಪ್ಪ | ೪೫ | ಕೃಷಿ | ೬ | ೭.೨.೨೦೦೩ |
| ರಾಟಿ ಕೊತ್ಲಪ್ಪ | ೫೦ | ಬಟ್ಟೆ ವ್ಯಾಪಾರಿ | ೪ | ೯.೨.೨೦೦೩ |
| ಎನ್. ಕೊತ್ಲಪ್ಪ | ೫೫ | ಕೃಷಿ | ೧ | ೯.೨.೨೦೦೩ |
| ವಿ. ವೆಂಕಟೇಶ್ | ೪೩ | ಸದಸ್ಯರು, ಪ.ಪಂ | ೬ | ೧೦.೨.೨೦೦೩ |
| ಸೋಮಯ್ಯನವರ ನಾಗರಾಜ | ೨೮ | ವಾಲ್ಮೀಕಿ ಸಂಘದ ಅಧ್ಯಕ್ಷ | ೪ | ೧೦.೨.೨೦೦೩ |
| ಹನುಮಂತಪ್ಪ | ೪೬ | ಕೃಷಿ | ೭ | ೧೦.೨.೨೦೦೩ |
| ರಾಮಪ್ಪ | ೪೨ | ದಿನಗೂಲಿ ನೌಕರ | ೪ | ೧೨.೨.೨೦೦೩ |
| ಕೃಷ್ಣಪ್ಪ | ೨೬ | ಕೂಲಿ | ೬ | ೧೪.೨.೨೦೦೩ |
| ಎಸ್. ಕೊಟ್ರೇಶ್ | ೨೮ | ವಿದ್ಯಾಭ್ಯಾಸ | ೭ | ೧೪.೨.೨೦೦೩ |

| | | | | |
|---|---|---|---|---|
| ಯು. ಓಬಳಪ್ಪ | ೫೪ | ಜೀತದಾರ | ಕೆ.ಕೆ.ಹಟ್ಟಿ | ೧೫.೨.೨೦೦೩ |
| ಬಿ.ಕೆ.ಜಯಮ್ಮ | ೪೫ | ಅಧ್ಯಕ್ಷರು, ಪ.ಪಂ | ೪ | ೧೬.೨.೨೦೦೩ |
| ಪಿ.ನಾಗಮ್ಮ | ೪೩ | ಮಾಜಿ ಸದಸ್ಯರು, ಪ.ಪಂ. | ೬ | ೧೮.೨.೨೦೦೩ |
| ದೊಡ್ಡಮುದ್ದಮ್ಮ | ೪೭ | ಮನೆಗೆಲಸ | ೫ | ೧೯.೨.೨೦೦೩ |
| ತಿಂದಮ್ಮ | ೬೦ | ಕೂಲಿ | ೬ | ೨೨.೨.೨೦೦೩ |
| ಹನುಮವ್ವ | ೬೧ | ಮನೆಗೆಲಸ | ೬ | ೨೪.೨.೨೦೦೩ |
| ಚೌಡಮ್ಮ ಪಿ. | ೪೮ | ಮನೆಗೆಲಸ | ೭ | ೨೭.೨.೨೦೦೩ |



ಕೂಡ್ಲಿಗಿಯ ಶ್ರೀ ವಾಲ್ಮೀಕಿ ಮಹರ್ಷಿ ದೇವಸ್ಥಾನ



ಮ್ಯಾಸಬೇಡರ ದೈವಕ್ಕೆ ಊರು ಬೇಡರ ವ್ಯಕ್ತಿ ಮುಖ್ಯಸ್ಥನಾಗಿರುವುದು



ಮ್ಯಾಸಬೇಡರ ವಿವಾಹ ನಿಶ್ಚಿತಾರ್ಥ ಶಾಸ್ತ್ರವನ್ನು ಊರಬೇಡರ ವ್ಯಕ್ತಿ ನೆರವೇರಿಸುತ್ತಿರುವುದು



ಮ್ಯಾಸಬೇಡರ ವಿವಾಹದಲ್ಲಿ ಗಂಡಿಗೆ ಕಡ್ಡಾಯ ಪದ್ಧತಿಯ ರುಮಾಲು ಸುತ್ತಿರುವುದು



ಊರುಬೇಡರ ವರನಿಗೆ ಬಾಸಿಂಗ ಕಟ್ಟಿರುವುದು



ಬೇಡರು ಆಚರಿಸುವ ನವೀನ ಮಾದರಿಯ ಮೊಳೆ ಹೊಡೆಯುವ ಶಾಸ್ತ್ರ



ವಿವಾಹದ ದಿನದಂದು ಮ್ಯಾಸಬೇಡರು ಸತ್ಯನಾರಾಯಣ ಪೂಜೆ ಮಾಡುತ್ತಿರುವುದು



ಕೂಡ್ಲಿಗಿ ಪಟ್ಟಣದಲ್ಲಿ ಪ್ರಥಮ ಬಾರಿಗೆ ಮ್ಯಾಸಬೇಡರು ಹಾಗೂ ಊರುಬೇಡರು ವಿವಾಹವಾದ ದಂಪತಿಗಳು



ಬೇಡರ ಸಮುದಾಯದಲ್ಲಿ ಎದುರುಗೊಳ್ಳುವ ಶಾಸ್ತ್ರ



ಕಿತ್ತೂರು ಚನ್ನಮ್ಮ ಮಹಿಳಾ ನಿರಂತರ ಉಳಿತಾಯ ಸಂಘದ ಪ್ರತಿನಿಧಿಗಳು ಹಾಗೂ ಸದಸ್ಯರು



ಪ್ರಿಯದರ್ಶಿನಿ ಮಹಿಳಾ ನಿರಂತರ ಉಳಿತಾಯ ಸಂಘದ ಪ್ರತಿನಿಧಿಗಳು



ಪ್ರಿಯದರ್ಶಿನಿ ಮಹಿಳಾ ನಿರಂತರ ಉಳಿತಾಯ ಸಂಘದ ಸದಸ್ಯರು



ಬೇಡಸಮುದಾಯದ ಮಹಿಳೆ ಪಟ್ಟಣ ಪಂಚಾಯತಿ ಅಧ್ಯಕ್ಷೆಯಾಗಿರುವುದು



ಮ್ಯಾಸಬೇಡರು ಹಾಗೂ ಊರು ಬೇಡರು ಸೇರಿ ರಾಜಾ ವೀರಮದಕರಿನಾಯಕ ವೃತ್ತವನ್ನು ಉದ್ಘಾಟಿಸುತ್ತಿರುವುದು



ಮರಕೆಲಸವನ್ನು ಅವಲಂಬಿಸಿರುವ ಬೇಡರು



ನವೀನ ಮಾದರಿಯ ಋತುಮತಿ ಶಾಸ್ತ್ರ



ಪ್ರಸ್ತುತ ದಿನಗಳಲ್ಲಿ ಆಚರಿಸುತ್ತಿರುವ ಹಿರಿಯರ ಹಬ್ಬದ ಪೂಜೆ



ಗುಳೇವು ಲಕ್ಕಮ್ಮನ ಜಾತ್ರೆಯಂದು ದೇವತೆಯನ್ನು ಊರಿನಲ್ಲಿ ಸುತ್ತಿಸುತ್ತಿರುವುದು



ಗುಳೇವು ಲಕ್ಕಮ್ಮನ ಜಾತ್ರೆಯಂದು ಊರಿನಿಂದ ಗುಳೇವು ಕಿತ್ತು ತೋಟಗಳಲ್ಲಿ ಉಳಿದಿರುವ ದೃಶ್ಯ



ಕೂಡ್ಲಿಗಿ ಶ್ರೀ ಸೊಲ್ಲಮ್ಮ ದೇವತೆ



ದೇವರ ಕಟ್ಟೆಗಳಾದ ಬೇಡರ ಪಂಚಾಯ್ತಿ ಕಟ್ಟೆಗಳು



ಶ್ರೀ ಶಬರಿ ಮಲೈಸ್ವಾಮಿ ಅಯ್ಯಪ್ಪ ಕ್ಷೇತ್ರ ದರ್ಶನಕ್ಕೆ ಹೊರಟಿರುವುದು.

# ಗ್ರಂಥಋಣ

## ಕನ್ನಡ ಗ್ರಂಥಗಳು


೬. ಅನಂತ ಕೃಷ್ಣ ಹೆಬ್ಬಾರ ಮತ್ತು ಎನ್. ರಾಮಚಂದ್ರ ಉಡುಪ, ಭಾರತ ಸಂಘ ಜೀವನದಿಂದ ಗುಲಾಮಗಿರಿಗೆ, ಅಭಿವ್ಯಕ್ತ ಪ್ರಕಾಶನ, ಮಂಗಳೂರು, ೧೯೮೩

೨. ಈಶ್ವರಪ್ಪ ಎಂ.ಜಿ, ಮ್ಯಾಸಬೇಡರು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೨

೪. ಡಾ. ಕರಿಶೆಟ್ಟಿ ರುದ್ರಪ್ಪ, ಮ್ಯಾಸನಾಯಕರು : ಒಂದು ಜನಾಂಗಿಕ ಅಧ್ಯಯನ, ೧೯೯೫

೨೫. ಕಟ್ಟಿ ಎ.ಆರ್, ಭಾರತೀಯ ಸಮಾಜ ಅಧ್ಯಯನ, ವಿಜಯ ಪಬ್ಲಿಕೇಷನ್ಸ್, ಗದಗ, ೧೯೯೦

೧. ಡಾ. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೧೭. ಕುಂಬಾಸ, ಬಳ್ಳಾರಿ ಜಿಲ್ಲೆ ಸಾಂಸ್ಕೃತಿಕ ದರ್ಶನ, ಮಾಲತೇಶ ಪ್ರಕಾಶನ, ಹರಪನಹಳ್ಳಿ

೨೮. ಡಾ. ಕೇಶವನ್ ಪ್ರಸಾದ್, ಬುಡಕಟ್ಟು ಮಹಾಕಾವ್ಯ ಮಾಲೆ, ಮಲೆಮಾದೇಶ್ವರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೧೪. ಡಾ. ಚಂದ್ರಶೇಖರ ಬಿ. ದಾಮ್ಲೆ, ಭಾರತೀಯ ಸಾಮಾಜಿಕ ಅಧ್ಯಯನ, ನವೀನ್ ಪ್ರಕಾಶನ, ಬೆಂಗಳೂರು

೨೭. ಚೆಲುವರಾಜು, ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨೯. ಜೋಗನ್ ಶಂಕರ್, ಗ್ರಾಮಸಮಾಜ, ಜೀವ ಪ್ರಕಾಶನ, ಮೈಸೂರು, ೧೯೯೫

೨೩. ಧರ್ಮಾರಾವ್ ತಾಪಿ, ರವಿ ಬೆಳಗೆರೆ (ಅನು), ವಿವಾಹ ಹುಟ್ಟು ಮತ್ತು ಪೂರ್ವೋತ್ತರ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೩

೧೩. ನಂಜಮ್ಮಣ್ಣಿ ಎಂ, ಡಾ. ನಾಯಕ ಹಾ.ಮಾ (ಪ್ರ.ಸಂ), ಭಾರತೀಯ ಸಾಮಾಜಿಕ ಸಂಸ್ಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ, ಮೈಸೂರು

೧೫. ನಾರಾಯಣ ವಿಶ್ವ ಎಂ, ಸಮಾಜಶಾಸ್ತ್ರ, ಚೇತನ ಬುಕ್ ಹೌಸ್, ಮೈಸೂರು, ೧೯೮೭

೭. ಪ್ರಭಾಕರ ಎ.ಎಸ್, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೯. ಡಾ. ಪಾಂಡುರಂಗ ಡಿ.ಆರ್, ಮತ್ತು ಗೋವಿಂದ ಪೈ ರಾ.ಕ, ದಕ್ಷಿಣ ಕನ್ನಡ ಜಿಲ್ಲೆ ಭೈರರು (ಪಿಎಚ್.ಡಿ. ಮಹಾಪ್ರಬಂಧ), ಸಂಶೋಧನ ಕೇಂದ್ರ, ಉಡುಪಿ.

೨೪. ಪೆರ್ಲ ಮಾ.ಭ, ಭಾರತೀಯ ವಿವಾಹ ಸಂಸ್ಕಾರ

೨೬. ಡಾ. ಬೋರಲಿಂಗಯ್ಯ ಹಿ.ಚಿ, ಬುಡಕಟ್ಟು ಹುಟ್ಟು, ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೨. ಭೈರಪ್ಪ ಕೆ, ಭಾರತೀಯ ಸಮಾಜದ ಅಧ್ಯಯನ, ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ, ಗುಲಬರ್ಗಾ

೩. ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಗೊಲ್ಲ ಕಡಗ, ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು, ೧೯೯೯

೧೧. ಡಾ. ಮೈತ್ರಿ ಕೆ.ಎಂ, ಬುಡಕಟ್ಟು ಕುಲಕಸಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೮. ಮೋಹನ್‌ರಾವ್ ಬಿ, ಸಮಾಜಶಾಸ್ತ್ರ, ವಿಜಯ ಬುಕ್ ಡಿಪೋ, ಗದಗ, ೧೯೮೭

೨೧. ಶಂಕರನಾರಾಯಣ ತೀ.ನಂ, ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪ್ರಸಾರಾಂಗ, ಮೈಸೂರು ವಿ.ವಿ, ಮೈಸೂರು

೧೬. ಶಂಕರರಾವ್ ಚ.ನ, ಭಾರತೀಯ ಸಮಾಜ, ಜೈ ಭಾರತ್ ಪ್ರಕಾಶನ, ಮಂಗಳೂರು, ೧೯೯೫

೨೨. ಶಾಮಾಚಾರಣದುಬೆ, ಭಾರತೀಯ ಸಮಾಜ, ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ನವದೆಹಲಿ, ೧೯೯೪

೩೧. ಲೋಕರಾಜ್ ಡಿ, ಬಳ್ಳಾರಿ ಜಿಲ್ಲೆಯ ದುರುಗ ಮುರುಗಿಯರು : ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಎಂ.ಫಿಲ್ ಸಂಪ್ರಬಂಧ

೩೦. ವಿರೂಪಾಕ್ಷಿ ಪೂಜಾರಹಳ್ಳಿ, ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾದ ಬೇಟೆ ಮತ್ತು ಬೇಡರ ಸಂಬಂಧ, ಪಿಎಚ್.ಡಿ. ಮಹಾಪ್ರಬಂಧ, ಅಪ್ರಕಟಿತ

೧೦. ವೀಣಾ ಎಂ.ಪಿ, ಮನೆ ಸಮಾಜ ಮತ್ತು ಸಂಸ್ಕೃತಿ, ನೆಲೆಮನೆ ಪ್ರಕಾಶನ, ಶ್ರೀರಂಗಪಟ್ಟಣ

೮. ಹಿರೇಮಠ ಎಸ್.ಎಸ್, ಜಾತ್ರೆಗಳು ಭಾಗ ೨, ಸಮತಾ ಪ್ರಕಾಶನ, ಹೊಸಪೇಟೆ

೫. ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬

೨೦. ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ ೧೯೯೯ - ೨೦೦೦, ಜಿಲ್ಲಾ ಸಂಗ್ರಹಣಾಧಿಕಾರಿಗಳ ಕಚೇರಿ, ಬಳ್ಳಾರಿ

೧೯. ಸಾಮಾಜಿಕ ಪರಿವರ್ತನೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೪

**ಪತ್ರಿಕೆಗಳು**

೧. ಕನ್ನಡ ಪ್ರಭ,

೨. ದಿಕ್ಸೂಚಿ, ಆಗಸ್ಟ್ ೨೦೦೨

೩. ಪ್ರಜಾವಾಣಿ ವಿಶೇಷಾಂಕ, ೨೦೦೨

**ಆಂಗ್ಲ ಗ್ರಂಥಗಳು**

1. Sociology, Champion/Hastings/Harris, University of Tennesee, New York
2. Sociology, 3rd Edi, David B. Briknker Hoff, Lynn. K White, West Publication Company, Sanfrancisco, 1991
3. Socioloyg, 4th Edi, John J. Macionis, Prentice Hall, Engle word cliffs, New Jersey, 1993
4. Principles of Sociology R.N. Sharma, Media Promoters Publications Pvt. Ltd. Bombay
5. Changeology, D.M. Raviprasad, Maitreya Publications, Warangal, 1996
6. Sociology, 5th Edi, Donald Light, Suzanne Kellar, Craigcelhoun, Alfred A. Knopf, New York, 1989

